ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿಗೆ ಸ್ಫುಟವಾಗಿ ಬರೆದು ಕಳುಹಿಸ ಬೇಕು. ಸಾದರ ಸ್ವೀಕಾರ ಮತ್ತು ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸು ವಾಗ ಎರಡು ಪ್ರತಿಗಳನ್ನು ಕಳುಹಿಸಿ. ಆಯ್ದ ಪುಸ್ತಕಗಳನ್ನು ರಿವ್ಯೂ ಮಾಡಲಾಗುವುದು.

ಲೇಖನ / ರಿವ್ಯೂಗಾಗಿ ಪುಸ್ತಕಗಳನ್ನು ಕಳುಹಿಸುವ ವಿಳಾಸ—


**ಗಂಗಾಧರ ಮೂರ್ತಿ**
6 (2), ಬೀಜಿಟಿ ಬಿಲ್ಡಿಂಗ್ಸ್
ಧನಲಕ್ಷ್ಮಿ ಗಿರಣಿ ಹಿಂಭಾಗ
ಶ್ರೀನಗರ, ಗೌರಿಬಿದನೂರು-561208


ಚಂದಾ ಮತ್ತು ವ್ಯವಹಾರ-


**ಸಮುದಾಯ ವಾರ್ತಾಪತ್ರ**
46, ಅಂಗಡಿಬೀದಿ, ಬಸವನಗುಡಿ
ಬೆಂಗಳೂರು-560 004

ವಾರ್ಷಿಕ ಚಂದಾ ರೂ. **15** ಆಜೀವ ಚಂದಾ ರೂ. **200**

ಬಿಡಿಪ್ರತಿ ರೂ. **1-50**


**ಡಾ|| ರಾ. ಶಿ. ಹಾಗೂ ಡಾ|| ಡಿ. ಎಸ್. ಕರ್ಕಿ** ಅವರುಗಳ ನಿಧನದ ಬಗ್ಗೆ ವಾರ್ತಾಪತ್ರ ಸಂತಾಪ ವ್ಯಕ್ತಪಡಿಸುತ್ತದೆ.

ಈ ಸಂಚಿಕೆಯಲ್ಲಿ................


| | | |
|---|---|---|
| ಸ್ವಾಭಾವಿಕವಾದೊಂದು ಸಾವು | 1 | ಸೇತು / ಕೆ. ಕೆ. ಗಂಗಾಧರನ್ |
| ಕನ್ನಡ ರಂಗಭೂಮಿಯ ಆಯಾಮಂಗಳು | 15 | ಪ್ರೊ. ಬಿ. ಚಂದ್ರಶೇಖರ್/ ವೀ ಜೀ ಪಾಲ್ |
| ಗಣಪತಿ | 21 | ಪುರಾಣಂ ಸುಬ್ರಮಣ್ಯಶರ್ಮ ನಗರಗೆರೆ ರಮೇಶ್ |
| ಕೊಂಡಜ್ಜಿಯಲ್ಲಿ ಬಯಲಾಟ | 31 | ರಂಗಾರೆಡ್ಡಿ ಕೋಡಿರಾಂಪುರ |
| ವಿಶ್ವಕಥಾಲೋಕದ ಮನುಷ್ಯ | 35 | ಬಿದರಹಳ್ಳಿ ನರಸಿಂಹಮೂರ್ತಿ |
| ಜನೋತ್ಸವ | 43 | ಹ. ವೆಂ. ವೇಣುಗೋಪಾಲ್ |
| ವಿಚಾರ | 45 | ದಡ್ಡ |


ಮುಖ ಪುಟ : ವೇಣು


ಮುದ್ರಕರು-ಪ್ರಕಟಣೆ : ಪಿ. ಗಂಗಾಧರಸ್ವಾಮಿ, ಪ್ರಧಾನ ಕಾರ್ಯದರ್ಶಿ, ಸಮುದಾಯ ಸಮನ್ವಯ ಸಮಿತಿ (ರಿ) 46, ಅಂಗಡಿ ಬೀದಿ, ಬಸವನಗುಡಿ, ಬೆಂಗಳೂರು-4.
ಮುದ್ರಣ : ಕರ್ನಾಟಕ ಪ್ರೆಸ್‌ಮೆನ್ ಅಸೋಸಿಯೇಟ್ಸ್ [ ಪ್ರೈ ] ಲಿ., ಬೆಂಗಳೂರು-4.

# ಸ್ವಾಭಾವಿಕವಾದೊಂದು ಸಾವು

ಸೇತು

ರಾಮಚಂದ್ರ ತೀರಿಕೊಂಡಿದ್ದು ಒಂದು ರಜಾ ದಿನದ ಮುಂಜಾನೆ. ಕಾಯಿಲೆ ಏನೂ ಇರಲಿಲ್ಲ. ಸಾಮಾನ್ಯವಾದೊಂದು ಹೃದಯಾಘಾತ. ಅವನ ಹುಟ್ಟಿನಂತೆಯೇ ಸಾವು ಕೂಡ ಒಂದು ಅಸಗತ್ಯ ಘಟನೆ.

ಆತ ಸಾಯುವ ವೇಳೆಯಲ್ಲಿ ನಾವು ಕೆಲವರು ಪಕ್ಕದ ಕೊಠಡಿಯಲ್ಲೇ ಐವತ್ತಾರು ಆಡುತ್ತಿದ್ದೆವು. ಓಡಿ ಬಂದು ತಿಳಿಸಿದ್ದು ನಮ್ಮ ನಿವಾಸದ ಕೆಲಸದ ಹುಡುಗ ಕಿಟ್ಟ.

"ರಾಮಚಂದ್ರರವರು ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ" ಎಂದಿದ್ದ.

ನಾನು ನಲವತ್ತೆಂಟು ಕರೆದಿದ್ದು ಗೆಲ್ಲುವ ಕೊನೆಯ ಹಂತದಲ್ಲಿದ್ದೆ. ಆದ್ದರಿಂದ ನಾನು ಅವನಿಗೆ, 'ನಿಲ್ಲಯ್ಯ ಈ ಕೈಯೊಂದಾಗಲಿ' ಎಂದು ಗದರಿದೆ.

"ಹಾಗಲ್ಲ ಸಾರ್, ನನಗೇಕೋ ಭಯವಾಗ್ತಾ ಇದೆ" ಕಿಟ್ಟ ತುಂಬಾ ಗಾಬರಿಯಿಂದಲೇ ಉತ್ತರಿಸಿದ. ಇನ್ನೇನು ಅವನ ಕಣ್ಣಿನಿಂದ ನೀರು ಸುರಿಯಬಹುದೇನೋ ಎನಿಸಿತು.

ಆದರೆ ಗೆಲ್ಲುವ ಆಟ ಕೈಬಿಡಲು ಮನಸ್ಸಾಗದೇ ಮುಗಿಸಿಯೇ ಎದ್ದೆವು.

ಪಕ್ಕದ ಕೊಠಡಿಯಲ್ಲಿ ರಾಮಚಂದ್ರನೆಂಬ ಔಷಧ ಕಂಪೆನಿಯೊಂದರ ಪ್ರತಿನಿಧಿ ಬೆವರಿನಲ್ಲಿ ತೊಯ್ದು ಕುಸಿದುಬಿದ್ದಿದ್ದ. ಕೊಠಡಿಯೆಲ್ಲಾ ಬೆವರಿನ, ಹೃದಯಾಘಾತದ, ಸುಟ್ಟ ಮೋಟಾರಿನ ವಾಸನೆ.

ನಾಡಿ ಹಿಡಿದು ಎದೆಯಮೇಲೆ ಕೈಯಿಟ್ಟು ನೋಡಿ ಕರುಣಾ "ಮುಗಿಯಿತು" ಎಂದ. ಸುಮಾರು ಮೂವತ್ತೈದು ವರ್ಷಗಳ ಕಾಲ ಉಸಿರಾಡಿದ ಮನುಷ್ಯನೊಬ್ಬನ ಬಗ್ಗೆ ಕ್ಷಣವೂ ಚಿಂತಿಸದೆ ಹೀಗೆ ಹೇಳಬಾರದಿತ್ತೇನೋ ಎನಿಸಿತು ಕರುಣನಿಗೆ. ಆದ್ದರಿಂದಲೋ ಏನೋ ಆತ, "ಮುಗಿಯಿತು ಇನ್ನೇನು ಮಾಡುವುದು" ಎಂದ ಮತ್ತೊಮ್ಮೆ.

ರಾಮಚಂದ್ರ ತೀರಿಕೊಂಡ ಎಂದು ನಮಗೆಲ್ಲರಿಗೂ ಅನಿಸಿತ್ತು. ಏಕೆಂದರೆ ಆತ ಮಲಗಿದ ದೃಶ್ಯವೇ ಅದನ್ನು ಸಾರಿ ಹೇಳುತ್ತಿತ್ತು. ಹಾಗೆ ಅವನೆಂದೂ ಮಲಗಿದವನೇ ಅಲ್ಲ. ನಾವು ಅವನನ್ನು ನೋಡುತ್ತಿದ್ದುದು ನಡೆದಾಡುವ ಜೀವ ವಾಗಿಯೇ ಹೊರತು ಮಲಗಿದ ಹೆಣವಾಗಿಯಲ್ಲ.

ಡಾಕ್ಟರರಿಗೆ ಫೋನು ಮಾಡಲಾಯಿತು.

ರಾಮಚಂದ್ರ ತೀರಿಕೊಂಡ ಎಂದು ಹೇಳಲು ನಮ್ಮಲ್ಲಿ ಯಾರಿಗೆ ತಾನೆ ಅಧಿ ಕಾರವಿದೆ ? ನಮ್ಮೆಲ್ಲಾರಲ್ಲೂ ಸರಕಾರ ಕೊಟ್ಟ ರಿಜಿಸ್ಟರ್ಡ್ ನಂಬರಿಲ್ಲವಲ್ಲ. ಡಾ॥ ಅಚ್ಯುತನ್ ನಾಯರ್‌ರವರು ಬಂದು 'ರಾಮಚಂದ್ರ ಸತ್ತಿಲ್ಲ'ವೆಂದು ಹೇಳಿದರೆ ಅದರರ್ಥ ಸತ್ತಿಲ್ಲವೆಂದೇ.

ನಾನು ಕರುಣನನ್ನು ತರಾಟೆಗೆ ತೆಗೆದುಕೊಂಡೆ.

"ವಿಷಯಗಳನ್ನು ಗೊತ್ತಿಲ್ಲದೆ ಹೇಳಬಾರದು. ಪ್ರತಿಯೊಬ್ಬರಿಗೂ ಅವರವರದೇ ಆದ ಕೆಲಸಗಳಿವೆ, ಮಿತಿಗಳಿವೆ. ಅದನ್ನು ಮೀರಬಾರದು. ನೀನು ಲೆಕ್ಕ ಪುಸ್ತಕ ಗಳನ್ನು ನೋಡಿ ಲೆಕ್ಕ ಹಾಕುವವ. ಊರೆಲ್ಲಾ ತಿರುಗಿ, ದೇಶ ಪರದೇಶಗಳನ್ನೆಲ್ಲಾ ಅಲೆದು ಲೆಕ್ಕಪುಸ್ತಕಗಳ ಪುಟಗಳನ್ನೆಲ್ಲಾ ಕರತಲಾಮಲಕ ಮಾಡಿ ತಪ್ಪು ಪತ್ತೆಹಚ್ಚಿ ತಪ್ಪಿತಸ್ಥರನ್ನು ಕಟಕಟೆಯಲ್ಲಿ ನಿಲ್ಲುವಂತೆ ಮಾಡುವದು ನಿನ್ನ ಕೆಲಸ. ಮನುಷ್ಯನ ಶರೀರದ ಬಗ್ಗೆ ನಿನಗೇನು ಗೊತ್ತು ? ಮಲಗಿ ನಿದ್ರಿಸುವ ಮನುಷ್ಯನನ್ನು ಸತ್ತ ಎಂದು ಕೂಗಿ ಹೇಳಲು ನಿನಗೇನು ಅಧಿಕಾರ ?"

ಕರುಣನಿಗೆ ನನ್ನ ಮಾತುಗಳು ಅಷ್ಟಾಗಿ ಹಿಡಿಸಲಿಲ್ಲ.

"ಲೆಕ್ಕಗಳು ತಪ್ಪಾದರೆ ಕಾಟುಹಾಕಿ ಮತ್ತೆ ಸರಿಪಡಿಸಬಹುದು. ಕೆಳಗೆ ಹಸಿರು ಶಾಯಿಯಲ್ಲಿ ಸಹಿ ಹಾಕಿದರೆ ಸಾಕು. ಆದರೆ ಮನುಷ್ಯನ ಜೀವನ ಹಾಗ ಲ್ಲವಲ್ಲ. ಹೃದಯದ ಬಡಿತ ನಿಂತರೆ ನಿಂತಂತೆಯೇ. ಅದರಲ್ಲಿ ಎರಡು ಅಭಿಪ್ರಾ ಯಗಳಿಲ್ಲ. ಅದು ತರ್ಕಿಸುವ ವಿಚಾರವೂ ಅಲ್ಲ. ಕಣ್ಣಿಗೆ ಕಾಣುವ ಸತ್ಯ ಕೆಲವೊಮ್ಮೆ ವೈದ್ಯಕೀಯ ಸತ್ಯಕ್ಕಿಂತಲೂ ಘೋರ." ಎಂದ.

ನಾನು ಮತ್ತೆ ವಾದಿಸಲು ಹೋಗಲಿಲ್ಲ. ಏಕೆಂದರೆ ಕರುಣನಿಗೆ ರಾಮ ಚಂದ್ರನ ಕುರಿತು ನನಗಿಂತಲೂ ಗೊತ್ತಿದೆ. ಹೆಚ್ಚುಕಡಿಮೆ ಇಬ್ಬರ ಕೆಲಸವೂ ಒಂದೇ ರೀತಿಯದು. ರಾಮಚಂದ್ರ ಊರೂರು ತಿರುಗಿ ಔಷಧಿ ಮಾರುತ್ತಾನೆ. ಕರುಣನೂ ಊರೂರು ಅಲೆದು ಲೆಕ್ಕ ಪರಿಶೀಲನೆ ನಡೆಸುತ್ತಾನೆ. ಆ ದೃಷ್ಟಿಯಿಂದ ಕರುಣ, ರಾಮಚಂದ್ರನ ಬಗ್ಗೆ ತಪ್ಪಾಗಿ ಅಭಿಪ್ರಾಯ ಮೂಡಿಸುವ ಅಗತ್ಯವಿಲ್ಲ.

ನಮ್ಮ ವಾದ-ವಿವಾದಗಳಿಗೆ ಪರದೆ ಬೀಳುವಷ್ಟರಲ್ಲಿ ಹಳೆಯ ಮೋರಿಸ್ ಮೈನರ್ ಕಾರಿನಲ್ಲಿ ಡಾ॥ ಅಚ್ಯುತನ್‌ನಾಯರ್ ಬಂದಿಳಿದರು. ಮಿಲಿಟರಿಯಲ್ಲಿ ಸಾವಿರಾರು ಸಾವನ್ನು ಕಂಡ ಭಾಗ್ಯವಂತ ಅಚ್ಯುತನ್‌ನಾಯರ್. ನಿವೃತ್ತಿ ಹೊಂದಿದಾಕ್ಷಣ ಅವರು ಸುಮ್ಮನಿರಲಿಲ್ಲ. ವೈದ್ಯಕೀಯ ವೃತ್ತಿಯನ್ನು ಮುಂದುವರಿಸಿದರು.

ಲೋಹದ ಟೊಪ್ಪಿ, ಕಾಕಿಬಣ್ಣದ ಮಂಡಿಯುವರೆಗಿನ ಕಾಲುಚೀಲ, ವಾಕಿಂಗ್ ಸ್ಟಿಕ್, ತುಂಡು ಮೀಸೆ.........

ಕಾರನ್ನು ಒಂದು ಮೂಲೆಯಲ್ಲಿ ನಿಲ್ಲಿಸಿ, ಹಿಂಬದಿಯ ಚಕ್ರಕ್ಕೆ ಒಂದು ದಪ್ಪ ಕಲ್ಲಿನ ಆಸರೆ ಕೊಟ್ಟು ಡಾ॥ ಅಚ್ಯುತನ್‌ನಾಯರರು ಕೊಠಡಿಯ ಅಂಗಳದಲ್ಲಿ ಅತ್ತಿಂದಿತ್ತ ಮೂರು ನಾಲ್ಕು ಬಾರಿ ನಡೆದಾಡಿದರು. ಒಂದೆರಡು ಕಡೆ ಮಂಡಿಯೂರಿ ಪರಿಶೀಲಿಸಿದರು. ಡಾಕ್ಟರರ ಕೆಂಗಣ್ಣುಗಳು ಬಿಳಿ ಮರಳಿನಲ್ಲಿ ಏನನ್ನೋ ಹುಡುಕುವಂತಿದ್ದವು.

"ಏನು ಡಾಕ್ಟರರೆ ಹುಡುಕುತ್ತಾ ಇದ್ದೀರಲ್ಲ ?" ಎಂದೆ ನಾನು.

"ಹೆಜ್ಜೆ ಗುರುತುಗಳನ್ನು........" ಡಾಕ್ಟರರು ನುಡಿದರು.

"ಹಾಂ...." ನನಗರ್ಥವಾಗಲಿಲ್ಲ.

"ಹೌದು.... ಕೋಣನ ಹೆಜ್ಜೆಗುರುತುಗಳನ್ನು"

ಅವರ ಮುಖದಲ್ಲಿ ಗಾಂಭೀರ್ಯವಿತ್ತು. "ಸಾವಿಗೆ ಅದಕ್ಕಿಂತಲೂ ಕರಾರುವಾಕ್ಕಾದ ಲಕ್ಷಣಗಳು, ಮೆಡಿಕಲ್ ಸೈನ್ಸ್‌ನಲ್ಲಿ ಸಿಗಲಾರದು."

ಕೆಲವು ನಿಮಿಷಗಳ ನಂತರ, ಡಾಕ್ಟರರ ಮುಖ ಪ್ರಸನ್ನವಾಯಿತು.

"ನೋಡಿ...ಅಲ್ಲಿಂದಲೇ ಬಂದಿದ್ದು. ಅಲ್ಲಿಂದ ಹಾಗೆಯೇ ದಕ್ಷಿಣಕ್ಕೆ ಹೋಗಿರಬೇಕು. ಹಿಂತಿರುಗುವಾಗಿನ ಹೆಜ್ಜೆಗುರುತುಗಳಿಗೆ ಆಳ ಜಾಸ್ತಿಯಿದೆ. ಅಂದರೆ "

"ಅಂದರೆ...." ನಾವು ಪರಸ್ಪರ ಮುಖ ನೋಡಿಕೊಂಡೆವು.

"ಅಂದರೆ.... ಹಿಂತಿರುಗುವಾಗ ಬೆನ್ನಿನ ಮೇಲೊಂದು ಭಾರವಿರಲೇಬೇಕು" ಡಾಕ್ಟರರು ತನ್ನ ತುಂಡು ಮೀಸೆಯನ್ನು ಕುಣಿಸಿದರು.

ಮತ್ತೆ ಡಾಕ್ಟರರು ತಲೆ ಕುಲುಕಿ ತನ್ನಷ್ಟಕ್ಕೆ ಏನೇನೋ ಮಾತನಾಡುತ್ತಾ ಕೊಠಡಿಯೊಳಕ್ಕೆ ಪ್ರವೇಶಿಸಿದರು.

ಕೊಠಡಿಯೊಳಕ್ಕೆ ಕಾಲಿಟ್ಟೊಡನೆ ವಾಸನೆ ಪತ್ತೆಮಾಡುವಂತೆ ಮೂಗಿನ ಹೊಳ್ಳೆಗಳನ್ನು ಅರಳಿಸಿ ನಿಂತು, ಬಗ್ಗಿ, ಕೂತು ಪರೀಕ್ಷಿಸಿದರು. ನಾವು ಕೇಳುವ ಮೊದಲೇ "ಸಾವಿನ ವಾಸನೆಯಿದೆಯೇ ಎಂದು ಪತ್ತೆಮಾಡುತ್ತಿದ್ದೇನೆ" ಎಂದರು.

"ಏಕೆ" ಎಂದು ಕೇಳಿದೆವು.

"ಪ್ರಕೃತಿ ಸಹಜವಾದ ಸಾಕ್ಷ್ಯಗಳು ಸಿಕ್ಕಿದ ನಂತರವೇ ಮನುಷ್ಯನ ಶರೀರವನ್ನು ಮುಟ್ಟಬೇಕು."

ಕೆಲವು ನಿಮಿಷಗಳ ಮೌನದ ನಂತರ ಡಾಕ್ಟರರ ಮುಖದಲ್ಲಿ ಕಿರುನಗೆ ಮೂಡಿತು.

"ಪೇಷೆಂಟಿನ ಜನ್ಮ ನಕ್ಷತ್ರ ಯಾವುದು ?" ಡಾಕ್ಟರರು ನನ್ನನ್ನೇ ಪ್ರಶ್ನಿಸಿದರು. ಅವನ ಹೆಸರು ಮಾತ್ರ ತಿಳಿದ ನಮಗೆ ಕುಂಡಲಿಯ ಪರಿಚಯವಿರಲಿಲ್ಲ. ಡಾಕ್ಟರು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಲೆಕ್ಕಹಾಕಿ,

"ಈಶಾನ್ಯ ದಿಕ್ಕಿನಿಂದ ನನಗೆ ಕರೆಬಂತು. ಅಂದರೆ....ಗೊತ್ತಾಯಿತು. ಆದರೆ ಒಂದೇ ಒಂದು ಸಾಕ್ಷ್ಯದಿಂದ ಈ ಸಾವನ್ನು ದೃಢಪಡಿಸುವುದು ಹೇಗೆ ?"

ನಮಗಾಗಲೇ ಡಾಕ್ಟರ ಬಗ್ಗೆ ಅಭಿಮಾನ ಉಕ್ಕಿ ಬಂದಿತ್ತು. ದೊಡ್ಡ ಪದವಿಯಿದ್ದರೂ, ಸೇನೆಯಲ್ಲಿ ಕೆಲಸ ಮಾಡಿದ್ದರೂ ಶ್ರೀಯುತರಿಗೆ ಕೋಣನಲ್ಲಿ, ನಿಮಿತ್ತದಲ್ಲಿ, ವಾಸನೆಗಳಲ್ಲೆಲ್ಲಾ ವಿಶ್ವಾಸವಿದೆ !

ಅವರು ರಾಮಚಂದ್ರನ ಎದೆಯಮೇಲೆ 'ಸ್ಟೆಥಾಸ್ಕೋಪ್' ಇಟ್ಟು, ಕೈಯ ನಾಡಿಯನ್ನು ಹಿಡಿದು ನೋಡುವಾಗ ನನಗನಿಸಿತು —

ರಾಮಚಂದ್ರನ ದೇಹದ ಯಾವ ಮೂಲೆಯಲ್ಲಾದರೂ ಉಸಿರು ಅಲೆದಾಡುತ್ತಿದ್ದರೆ ಡಾ॥ ಅಚ್ಯುತನ್ ನಾಯರ್ ಅದನ್ನು ಹೇಗಾದರೂ ಪತ್ತೆಹಚ್ಚುತ್ತಾರೆ. ಕಡ್ಡಿ ತುಂಡುಮಾಡಿದಂತೆ ಹೇಳಲಿಕ್ಕೂ ಸಾಕು. ಎಷ್ಟಾದರೂ ಮುಖವನ್ನೇ ನೋಡದೆ ಔಷಧಿ ಕೊಡುವ ಡಾಕ್ಟರಲ್ಲವೆ ?

ಕ್ರಮವಾಗಿ ಎಲ್ಲಾ ಪತ್ತೇದಾರಿ ಕೆಲಸವನ್ನು ಮಾಡಿದ ಅಚ್ಯುತನ್‌ನಾಯರ್‌ರವರು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಕುಳಿತರು. ಮತ್ತೆ ಎದ್ದು ಎರಡು ಹೆಜ್ಜೆ ಮುಂದಕ್ಕೆ ನಡೆದು ಪೂರ್ವಕ್ಕೆ ಮುಖಮಾಡಿ ನಿಂತರು. ಟೊಪ್ಪಿಯನ್ನು ಕೈಯಲ್ಲಿ

ಹಿಡಿದು ತಲೆತಗ್ಗಿಸಿ ಧ್ಯಾನಿಸಿದರು. ಟೊಪ್ಪಿಯನ್ನು ಕಂಕುಳಿಗೆ ವರ್ಗಾಯಿಸಿ ಎರಡು ಕೈಗಳನ್ನು ಜೋಡಿಸಿ ಕೈಮುಗಿದರು.

ನಂತರ ರಾಮಚಂದ್ರನ ನಿಧನವನ್ನು ಅಧಿಕೃತವಾಗಿ ಘೋಷಿಸಿದರು. ನನಗೆ ಸ್ವಲ್ಪ ಸಮಾಧಾನವಾಯಿತು. ಇನ್ನು ನಮ್ಮ ನಮ್ಮಲ್ಲೇ ವಾದಿಸುವ ಪ್ರಮೇಯ ವಿಲ್ಲ. ಡಾಕ್ಟರ್ ಅದಕ್ಕೊಂದು ತೀರ್ಪು ನೀಡಿದ್ದಾರೆ. ಇನ್ನಾರಿಗೂ ಆತನ ಸಾವಿನ ಬಗ್ಗೆ ಭಿನ್ನಾಭಿಪ್ರಾಯ ಬರಲು ಸಾಧ್ಯವಿಲ್ಲ. ಏಕೆಂದರೆ "ಇಟ್ ಈಸ್ ಎ ಮೆಡಿಕಲ್ ಡೆತ್"

ಆದರೂ ನಾನು ಸುಮ್ಮನೆ ಕೇಳಿದೆ. "ಸರ್, ಸಾವಿಗೆ ಕಾರಣವೇನಾದರೂ...." ಡಾಕ್ಟರ್ ನನ್ನ ಮುಖವನ್ನೊಮ್ಮೆ ತೀಕ್ಷ್ಣವಾಗಿ ನೋಡಿ, "ರೀ ಮಿಸ್ಟರ್, ಸತ್ತ ಮೇಲೆ ಕಾರಣ ಕಟ್ಕೊಂಡು ಏನಾಗ್ಬೇಕ್ರಿ. ವೈ ಡು ಯು ವಾಂಟ್ ಇಟ್ ?"

ಡಾಕ್ಟರು ತನ್ನ ಚೀಲವನ್ನು ತೆರೆದು ಒಂದು ಬಿಳಿಯ ನೀರಿನ ಹೂಜಿಯನ್ನು ಹೊರತೆಗೆದರು. ಅದರಿಂದ ಸ್ವಲ್ಪ ನೀರನ್ನು ಅಂಗೈಗೆ ಸುರಿದು. ಮತ್ತೊಂದು ಕೈಯಿಂದ ಆ ನೀರನ್ನು ಕೊಠಡಿಯಲ್ಲೆಲ್ಲಾ ಚಿಮುಕಿಸಿ, "ಇದರೊಂದಿಗೆ ಎಲ್ಲಾ ಮುಗಿದ ಹಾಗೆ" ಎಂದರು. ಡಾಕ್ಟರ ಮುಖ ಈಗ ಶಾಂತವಾಗಿತ್ತು. ಹೊರಗಡೆ ಮೋರಿಸ್ ಮೈನರ್ ಗುರುಗುಟ್ಟಿದಾಗ ನಾವೆಲ್ಲಾ ಕೊಠಡಿಯೊಳಗೆ ಸೇರಿದೆವು.

ರಾಮಚಂದ್ರ ಸತ್ತಿದ್ದು ಎಷ್ಟು ಹೊತ್ತಿನಲ್ಲಿ ?

ನಾನು ಜ್ಞಾಪಿಸಿಕೊಂಡೆ. ರೂಮ್‌ಬಾಯ್ ಕುಟ್ಟನ್ ಬಂದು ತಿಳಿಸಿದಾಗ ನಾನು ಕರುಣನ ಡೈಸ್ ಜಾಕಿಯನ್ನು ನನ್ನ "ಟ್ರಂಪ್" ಹತ್ತರಿಂದ 'ಹೊಡೆದು' ಎಲೆಗಳನ್ನು ಬಾಚುತ್ತಿದ್ದೆ. ನಾನಾಗ ನಲ್ವತ್ತು ಗೆಲ್ಲುವ ತರಾತುರಿಯಲ್ಲಿದ್ದೆ. ಅಂದರೆ ಟ್ರಂಪ್ ಹತ್ತನ್ನು ಎತ್ತಿ ಡೈಸ್ ಜಾಕಿಯನ್ನು ಹೊಡೆಯುತ್ತಿರುವಾಗ ರಾಮಚಂದ್ರ ಸಣ್ಣ ಅಳುವಿನೊಂದಿಗೆ ಕುಸಿದುಬಿದ್ದಿರಬಹುದೆ ? ಆಗಲೇ ಅವನ ಹೃದಯ ಕ್ರಿಯೆಯೂ ನಿಂತಿರಬಹುದೆ ?

ಏನೇ ಆಗಲಿ ರಾಮಚಂದ್ರ ಮಾತ್ರ ಇನ್ನಿಲ್ಲ.

ಇನ್ನು ಉಳಿದ ಕೆಲಸಗಳು ಬೇಕಷ್ಟಿವೆ. ನಾವೀಗ ಯೋಚಿಸುವುದನ್ನು ಬಿಟ್ಟು ಕ್ರಿಯಾಶೀಲರಾಗಲು ಮುಂದಾದೆವು.

'ಮೊದಲು ಈತನನ್ನೊಮ್ಮೆ ಸರಿಯಾಗಿ ಮಲಗಿಸೋಣ'. ಆಂಡಿ ಮಾಸ್ತರು ಎಚ್ಚರಿಸಿದರು. "ಊರೆಲ್ಲಾ ಓಡಾಡಿ ಔಷಧಗಳನ್ನು ಹಂಚಿ ಜೀವಗಳನ್ನುಳಿಸಲು ಶ್ರಮಿಸಿದ ಈತ, ಸತ್ತು ಮಲಗಿದ ದೃಶ್ಯ ನೋಡಲಿಕ್ಕಾಗ್ತಾಯಿಲ್ಲ."

ಮರಗಟ್ಟುತ್ತಿದ್ದ ಶರೀರವನ್ನು ನೆಟ್ಟಗೆ ಮಾಡಿ ನೆಲದ ಮೇಲೆ ಮಲಗಿಸಿದೆವು. ಕಿಟ್ಟನ್ ಓಡಿಹೋಗಿ ಒಂದು ಮಂಚ ತಂದ. ಶವವನ್ನು ಅದರ ಮೇಲೆ ಮಲಗಿಸಲಾಯಿತು.

ಸ್ಟಾಂಡಿನ ಮೇಲೆ ರಾಮಚಂದ್ರನ ಟೈ ನೇತಾಡುತ್ತಿತ್ತು. ಮೇಜದ ಮೇಲೆ ಅವನ ಉಬ್ಬಿದ ಔಷಧಿ ಚೀಲ ಓರೆಯಾಗಿ ಮಲಗಿತ್ತು.

ಹಗಲಿಗೆ ಕಾವೇರುತ್ತಿತ್ತು. ನಾನು ಒಂದು ಬಿಳಿಯ ಬಟ್ಟೆಯನ್ನು ತಂದು ರಾಮಚಂದ್ರನಿಗೆ ಹೊದಿಸಿದೆ. ಕೆಂಪು ಚುಕ್ಕಿಗಳಿರುವ ಟೈಯನ್ನು ಶವದ ಮೇಲೆ ಉದ್ದವಾಗಿಟ್ಟೆ. ಬೇಗನ್ನು ಆತನ ಕೈಯ ಬಳಿಯಲ್ಲಿಟ್ಟೆ.

ಇದರೊಂದಿಗೆ ಕೆಲವು ಪ್ರಾಥಮಿಕ ವಿಧಿಗಳನ್ನಾದರೂ ಮುಗಿಸಿದ ತೃಪ್ತಿ ನನಗಾಯಿತು. ಸದಾ ಎರಡು ಕಾಲುಗಳಲ್ಲಿ ಬಿಡುವಿಲ್ಲದೆ ನಡೆದಾಡುತ್ತಿದ್ದ ಮೆಡಿಕಲ್ ರೆಪ್ರೆಸೆಂಟೇಟಿವ್ ನಿಯಮದಂತೆ ಒಂದು ಶವವಾಗಿದ್ದಾನೆ. ಹೆಸರಿಲ್ಲದ ಊರಿಲ್ಲದ, ಅಪ್ಪ ಅಮ್ಮಂದಿರಿಲ್ಲದ ಅನಾಥ ಶವವಾಗಿ ನಮ್ಮನ್ನು ಪೇಚಿಗೆ ಸಿಕ್ಕಿಸಿದ್ದಾನೆ. ಅವನೊಂದಿಗೆ ಅವನ ಟೈ, ಬೇಗು ಎಲ್ಲವೂ ಸತ್ತುಹೋದವು. ದೊಡ್ಡ ದೊಡ್ಡ ಔಷಧಿಗಳನ್ನು ಉತ್ಪಾದಿಸುವ ಅವನ ಕಂಪೆನಿ ಈಗ ಎಷ್ಟೇ ಪ್ರಯತ್ನಿಸಿದರೂ ರಾಮಚಂದ್ರನನ್ನು ಎರಡು ಕಾಲುಗಳಲ್ಲಿ ನಡೆಸಲು ಸಾಧ್ಯವಿಲ್ಲ. ವಿಜ್ಞಾನ, ಬುದ್ಧಿ, ಟಾರ್ಗೆಟ್‌ಗಳಿಗೆಲ್ಲಾ ವಿದಾಯ ಹೇಳಿ ಹೊರಟೇಹೋಗಿದ್ದಾನೆ.

ಬಿಳಿಯ ಬಟ್ಟೆಯೊಳಗಿನಿಂದ ಹೊರಚಾಚಿರುವ ಕಾಲುಗಳನ್ನು ತೋರಿಸುತ್ತಾ ಕರುಣ ಹೇಳಿದ, "ಎಷ್ಟು ನಡೆದ ಕಾಲುಗಳು. ಪಾಪ. ಸವೆಯತೊಡಗಿದೆ"

"ಅದಕ್ಕೇನಂತೆ ಇನ್ನು ನಡೆಯಬೇಕಿಲ್ಲವಲ್ಲ." ಆಂಡಿ ಮಾಸ್ತರು ಹೇಳಿದರು, "ಈಗ ಕೋಣನ ಮೇಲೆ ಕೂತು ಹೋಗುತ್ತಿರಬಹುದು."

ಆಂಡಿಯ ಜೋಕಿಗೆ ನಗಬೇಕೆನಿಸಿದರೂ ಆಗಲಿಲ್ಲ.

ಇನ್ನು ಮುಂದಿನ ಕಾರ್ಯಗಳೇನೇನು ಎಂಬುದು ನನ್ನ ಚಿಂತೆಯಾಗಿತ್ತು.

"ಉಸಿರಾಡುತ್ತಿದ್ದಾಗ ನಾವು ನೋಡಿಕೊಂಡೆವು. ಉಸಿರು ನಿಂತಾಗ ನೋಡಬೇಕಾದವರು ರಕ್ತ ಸಂಬಂಧಿಗಳು" ಕರುಣ ನುಡಿದ.

"ಹೌದೌದು" ಮತ್ತೊಮ್ಮೆ ಸಮ್ಮತಿಸಿದೆ. "ಮನೆಯವರಿಗೆ ಮೊದಲು ತಿಳಿಸಬೇಕು. ಅವರು ಬಂದ ಮೇಲೆ ಉಳಿದ ಕೆಲಸಗಳು".

"ವಿಳಾಸವಿದೆಯೆ ?"

"ಆತನ ಪೆಟ್ಟಿಗೆಯಲ್ಲಿರಬಹುದು."

ಹುಡುಗ ರಾಮಚಂದ್ರನ ಪೆಟ್ಟಿಗೆಯನ್ನು ತಪಾಸಣೆ ಮಾಡತೊಡಗಿದ. ಸಾಕಷ್ಟು ಫೈಲುಗಳು, ಕರಪತ್ರಗಳು ದೊರೆತವು. ಲಿಂಡನ್ ಅಂಡ್ ಬ್ರಂಡನ್ ಔಷಧಿ ಕಂಪೆನಿಯ ಹೆಸರುಳ್ಳ ಲೆಟರ್‌ಪ್ಯಾಡ್, ವಿಸಿಟಿಂಗ್ ಕಾರ್ಡ್‌ಗಳು ಸಿಕ್ಕಿದವು.

ರಾಮಚಂದ್ರನಿಗೆ ಎಂದಾದರೂ ಸ್ವಂತವಾದ ವಿಳಾಸವೆಂಬುದೊಂದು ಇತ್ತೆ? ಔಷಧಿ ಕಂಪೆನಿಯ ಲೆಟರ್‌ಪ್ಯಾಡುಗಳ, ವಿಸಿಟಿಂಗ್ ಕಾರ್ಡುಗಳ ರಕ್ಷಣೆಯಲ್ಲಿ ಟೈ, ಬೇಗುಗಳೊಂದಿಗೆ ರಾಮಚಂದ್ರ ಬದುಕುತ್ತಿದ್ದ. ಇವಾವುದೂ ಇಲ್ಲದಿದ್ದರೆ ಅವನನ್ನು ಗುರುತಿಸಲೂ ಸಾಧ್ಯವಾಗುತ್ತಿರಲಿಲ್ಲ.

ಹೊತ್ತು ಮೀರುತ್ತಿದೆ.

ಏನೇ ಆದರೂ ಯಾರಿಗಾದರೂ ಒಂದು ತಂತಿ ಕೊಟ್ಟು ತಿಳಿಸಬೇಕಲ್ಲ ?: "ರಾಮಚಂದ್ರನ್ ಸೀರಿಯಸ್ ಸ್ಟಾರ್ಟ್ ಇಮ್ಮಿಡಿಯೇಟ್‌ಲಿ"

ಎಲ್ಲಕ್ಕೂ ಕೆಲವು ಆಚಾರಗಳಿವೆಯಲ್ಲ ! ತಂತಿ ಕೊಡದೆ ಯಾರಾದರೂ ಸತ್ತಿದ್ದಾರೆಯೆ ? ಈ ನಡುವೆ ಹುಡುಗ ಪೆಟ್ಟಿಗೆಯಿಂದ ಒಂದು ಕಪ್ಪು ಡೈರಿ ಹೊರತೆಗೆದ.

ನಾವೆಲ್ಲಾ ಸಮಾಧಾನದ ನಿಟ್ಟುಸಿರು ಬಿಟ್ಟು ಡೈರಿಯ ಹಾಳೆಗಳನ್ನೆಲ್ಲಾ ಒಂದೊಂದಾಗಿ ಮಗುಚತೊಡಗಿದೆವು. ಎಲ್ಲಾದರೂ ಊರು ವಿಳಾಸ ಗುರುತಿಸದೆ ಇರಲಾರ ಎಂಬುದು ನಮ್ಮೆಲ್ಲರ ಅನಿಸಿಕೆ.

ಇದ್ದಕ್ಕಿದ್ದಂತೆ ಹುಡುಗನ ಸ್ವರ ಏರಿತು.

"ಗುರುವಾಯೂರಪ್ಪ ಇದೇನಿದು ? " ಎಂದ.

ನಾವು ಕಣ್ಣುಬಿಟ್ಟು ನೋಡಿದೆವು. ಒಂದು ಪುಟದಲ್ಲಿ ಈ ದಿನದ ತಾರೀಕು ಕಪ್ಪುಶಾಯಿಯಲ್ಲಿ ಬರೆಯಲಾಗಿತ್ತು.

ಕೆ. ರಾಮಚಂದ್ರನ್

ಜನನ : 27 . 12 . 1948

ಮರಣ : 27 . 12 . 1981

ಹೌದು ಅದು ಖಂಡಿತಾ ರಾಮಚಂದ್ರನ ಹಸ್ತಾಕ್ಷರವೇ. ದುಬಾಯಿಯ ಆತನ ಸ್ನೇಹಿತ ಕೊಟ್ಟ ಲೇಖನಿಯಿಂದಲೇ ಅದನ್ನು ಬರೆಯಲಾಗಿತ್ತು. ಅನುಮಾನವೇ ಇಲ್ಲ.

ರಾಮಚಂದ್ರನಿಗೆ ತನ್ನ ಸಾವಿನ ಅರಿವಿತ್ತು. ರಾಮಚಂದ್ರನಿಗೆ ತಾನೆಷ್ಟು ಕಾಲ ಬದುಕುಳಿಯುತ್ತೇನೆಂಬುದೂ ತಿಳಿದ ವಿಷಯವಾಗಿತ್ತು.

ಡೈರಿಯಲ್ಲಿ ಬೇರೇನೂ ಇರಲಿಲ್ಲ.

ಅದರ ಹೊದಿಕೆಯ ಒಳಭಾಗದಲ್ಲಿ ಸಾಯಿಬಾಬನ ಫೋಟೋ ಹಚ್ಚಲಾಗಿತ್ತು. ಪಕ್ಕದ ಪುಟದಲ್ಲಿ ಹೆಸರು, ವಿಳಾಸ, ಕಾರುನಂಬ್ರು, ಟೆಲಿಫೋನು, ಇನ್‌ಕಮ್‌ಟ್ಯಾಕ್ಸ್ ನಂಬರುಗಳನ್ನು ಬರೆಯಬೇಕಾಗಿದ್ದ ಸ್ಥಳಗಳೆಲ್ಲಾ ಖಾಲಿ ಬಿದ್ದಿದ್ದವು. ಒಂದು ಮೂಲೆಯಲ್ಲಿ ಕಪ್ಪುಶಾಯಿಯಿಂದ ಕೆ. ರಾಮಚಂದ್ರನ್ ಎಂದು ಉದ್ದಕ್ಕೆ ಸಹಿ ಮಾಡಲಾಗಿತ್ತು. ಡೈರಿಯ ಉಳಿದ ಪುಟಗಳಲ್ಲೆಲ್ಲಾ ತಾನು ಅಲೆದ ಊರು, ಡಾಕ್ಟರುಗಳ ಹೆಸರು. ಫೋನ್ ನಂಬ್ರುಗಳು. ಅವರಿಗೆಲ್ಲಾ ವಿಳಾಸವಿತ್ತು. ಆದರೆ ಪಾಪ ರಾಮಚಂದ್ರನಿಗೆ ಒಂದು ಖಾಯಂ ವಿಳಾಸವಿರಲಿಲ್ಲ.

ಮತ್ತೆ—
ದಿನಪತ್ರಿಕೆಯೊಂದರಿಂದ ಕತ್ತರಿಸಿ ತೆಗೆದ ಜಾಹಿರಾತಿನ ತುಂಡು—

"ಈ ದಿನ ವಿವಾಹಿತರಾಗುತ್ತಾರೆ."

ಕೆಳಗೆ ಒಬ್ಬ ಯುವಕ ಮತ್ತು ಯುವತಿಯ ಭಾವಚಿತ್ರಗಳು. ಲೇಖನಿಯಿಂದ ಯುವಕನ ಮುಖವನ್ನು ವಿಕೃತಗೊಳಿಸಲಾಗಿತ್ತು.

ಸಮಯ ನಮ್ಮ ಪರದಾಟವನ್ನು ಗಮನಿಸದೆ ಮುಂದುವರಿಯುತ್ತಿತ್ತು.

"ಈ ಆಸಾಮಿ ನಮ್ಮನ್ನೆಲ್ಲಾ ಗೊಂದಲಾಪುರದಲ್ಲಿ ತಳ್ಳುವಂತಿದೆ". ಈ ತನಕ ವಿಳಾಸ ಹುಡುಕುತ್ತಿದ್ದ ಕುಟ್ಟಿ ಬೆವರುತ್ತಾ ಉಸುರಿದ. "ಹೇಗೆ ಅಡ್ರೆಸ್ ಕಂಡುಹಿಡಿಯೋದು ?" "ಅವನ ಕಂಪೆನಿಗೆ ಟೆಲಿಗ್ರಾಂ ಕಳಿಸಿದರೆ?"

"ಉತ್ತರ ಸಿಗುವವರೆಗೂ ಇವನ ಹೆಣ ಒಂದು ವಾರ ಇಲ್ಲಿ ಬಿದ್ದಿರಲಿ ಅಲ್ವಾ ?" ಕರುಣನಿಗೆ ರೇಗಿಹೋಗಿತ್ತು.

"ನೀವು ಹೇಳೋದು ಸರೀನೆ. ಟ್ರಂಕ್‌ಕಾಲ್ ಮಾಡಿದರೆ ?"

"ಮುಂಬಯಿಗಾ? ಚೆನ್ನಾಗಿದೆ. ಅಲ್ಲವರು ಸಾವಿರಾರು ಫೈಲು ಹುಡುಕಿ...."

"ನಾಳೆ ಪತ್ರಿಕೆಯಲ್ಲಿ ಫೋಟೋ ಕೊಟ್ಟು ನೋಡೋಣ. ಒಂದು ಹಳೆ ಫೋಟೋ ಈತನ ಪರ್ಸಿನಲ್ಲಿದೆ"

"ಆಮೇಲೆ ಎಷ್ಟು ದಿವಸಾಂತ ಕಾಯೋದು ?"

"ಅಲ್ಲದೆ ಬೇರೆ ಏನು ದಾರಿಯಿದೆ ಮಾಸ್ತರೇ"

ಅಷ್ಟರಲ್ಲಿ ಆಂಡಿ ಮಾಸ್ತರು ಕೇಲೆಂಡರಿನಲ್ಲಿ ಗುರುತಿಸಿದ್ದ ಒಂದು ಟೆಲಿಫೋನ್ ನಂಬರನ್ನು ಪತ್ತೆಹಚ್ಚಿ ತಂದರು.

"ಇದರಲ್ಲಿ ವಿಚಾರಿಸಿದ್ರೆ...."

"ಟ್ರೈ ಮಾಡ್ಲಿಕ್ಕೇನಂತೆ"

ಆಂಡಿ ಮಾಸ್ತರು ಫೋನಿಗೆ ಓಡಿದರು

ಅದೊಂದು ಟ್ಯಾಕ್ಸಿಸ್ಟಾಂಡು. ಒಬ್ಬ ಡ್ರೈವರ್ ಫೋನ್ ಎತ್ತಿದ.

"ಎಲ್ಲಿಂದ ಸಾರ್ ? ಗಾಡಿ ಬೇಕಿತ್ತಾ ?"

ಆಂಡಿ ಗಂಟಲು ಸರಿಪಡಿಸಿಕೊಂಡು, "ನಿಮ್ಮಲ್ಲಿ ಯಾರಿಗಾದ್ರೂ ರಾಮಚಂದ್ರನ ಪರಿಚಯ ಇದೆಯಾ ?

"ಯಾವ ರಾಮಚಂದ್ರ ?"

"ಮೆಡಿಕಲ್ ರೆಪ್"

"ಅಂದ್ರೆ........"

"ಟೈ ಕಟ್ಕೊಂಡು ದಪ್ಪ ಬೇಗ್ ಹಿಡ್ಕೊಂಡು ಓಡಾಡ್ತಾರಲ್ಲ......."

"ಗೊತ್ತಿಲ್ಲ ಸರ್.... ಬಹುಶಃ ಅಂಟೋನಿಗೆ ಗೊತ್ತಿರಬಹುದು. ಅವನು ಟ್ರಿಪ್ ಹೋಗಿದ್ದಾನೆ. ನಾಳೆ ಬರಬಹುದು"

ಆಂಡಿ ಮಾಸ್ತರು ಹಿಂತಿರುಗಿದರು.

"ಒಂದು ವೇಳೆ ಮುನಿಸಿಪಾಲಿಟಿಯವರಿಗೆ ಗೊತ್ತಿರಬಹುದು ...." ಯಾರೋ ಹೇಳಿದರು. ಅದೂ ಸರಿಯೇ. ಈ ನಗರದಲ್ಲಿ ಉಸಿರಾಡುವವರೆಲ್ಲರ ವಿಳಾಸ ಅವರಿಗೆ ಗೊತ್ತಿರಬೇಕಲ್ಲವೆ ?"

"ನಾನು ಹೋಗಿ ತಿಳಿದು ಬರುತ್ತೇನೆ" ಕರುಣ ಓಡಿದ.

ಅಷ್ಟರತನಕ ನಿಶ್ಯಬ್ಧವಾಗಿದ್ದ ನಮ್ಮ ಗುಂಪಿನ ಸೀನಿಯರ್ ವಾಸಣ್ಣ ಮೆತ್ತಗೆ ನನ್ನ ಬಳಿ ಬಂದರು. ಗುಟ್ಟು ಹೇಳುವಂತೆ ನನ್ನ ಕಿವಿಯಲ್ಲಿ, "ಅಲ್ಲಯ್ಯ, ಈ ನಗರದಲ್ಲಿರುವ ಎಲ್ಲಾ ಡಾಕ್ಟರುಗಳನ್ನೂ ಕೇಳಿ ನೋಡೋಣ. ಏನಾದರೂ ಗೊತ್ತಾಗಬಹುದು."

ಅದನ್ನೇಕೆ ಉಳಿಸೋದು , ನೋಡಿಯೇ ಬಿಡೋಣ.

ಹಗಲು ಮುದಿಯಾಗುತ್ತಿತ್ತು.

ನಾವು ಯಾರೂ ನೀರು ಸಹ ಮುಟ್ಟಿರಲಿಲ್ಲ.

ವಾಸಣ್ಣ ಫೋನು ಮಾಡಲು ಹೋದಾಗ ನಾನು ಪ್ರಾರ್ಥಿಸುತ್ತಿದ್ದೆ. "ಇದರಿಂದಲಾದರೂ ನಮ್ಮ ಸಮಸ್ಯೆ ಪರಿಹಾರವಾಗಲಿ." ಯಾರೂ ಇಲ್ಲವೆಂದರೆ ರಾಮಚಂದ್ರನ ಹೆಣ ಕೊಳೆಯಬೇಕಾಗುತ್ತದೆ. ಹೆಸರು, ವಿಳಾಸವಿಲ್ಲದೆ ಮುನಿಸಿ ಪಾಲಿಟಿಯ ಸ್ಮಶಾನದಲ್ಲಿ ಯಾರೋ ಒಬ್ಬನಾಗಿ ಮಣ್ಣಾಗುವುದು ಎಂತಹ ಶಿಕ್ಷೆ ! ಯಾರನ್ನೂ ಪ್ರೀತಿಸದೆ, ತಿರಸ್ಕರಿಸದೆ ಯಾರಿಗೂ ಸಹಾಯ ಮಾಡದೆ, ತೊಂದರೆ ಕೊಡದೆ ಬದುಕಿದ ರಾಮಚಂದ್ರ ಸತ್ತು ಹೆಣವಾದಾಗ ಪಕ್ಕ ದವರಿಗೆ ಪೇಚಾಟ.

ವಾಸಣ್ಣ ಜೋಲು ಮುಖದಿಂದ ಹಿಂತಿರುಗಿ, "ಫೋನಿನಲ್ಲಿ ಕೆಲವರು ಸಿಕ್ಕಿ ದರು ಆದರೆ..." ಮುಂದಿನದನ್ನು ಆತ ಹೇಳಬೇಕಾಗಿರಲಿಲ್ಲ.

ಸ್ವಲ್ಪ ಸಮಯದ ನಂತರ ಕರುಣನೂ ಜೋಲು ಮುಖದಿಂದಲೇ ಬಂದ.

"ಈ ದಿನ ರಜೆ. ನನಗೆ ನೆನಪೇ ಆಗಲಿಲ್ಲ...."ಅವನು ಬೇಸರದಿಂದಲೇ ನುಡಿದ.

"ನಾನು ಹೋದಮೇಲೆ ಹೊಳೆಯಿತು ಅಲ್ಲಿಗೆ ಹೋಗೋದು ಸ್ವಲ್ಪ ಅಪಾ ಯಾಂತ. ಯಾವುದಾದರೂ ಟ್ಯಾಕ್ಸಿ ಡ್ರೈವರುಗಳಿಗೆ ಬಾಕಿ ಕೊಡಲಿಕ್ಕಿದ್ದರೆ...."

"ಹೆಣ ಅವರಲ್ಲಿಗೇ ತೆಗೋಂಡೋದ್ರಾಯ್ತು. ಅಷ್ಟು ಕ್ರೂರವಾದದ್ದು ಸರಕಾರೀ ನಿಯಮ"

"ಮೊದಲೇ ಗೊತ್ತಾಗಿದ್ದರೆ ಅವರು ರಾಮಚಂದ್ರನ ಸಾವನ್ನೂ ತಡೆಯು ತ್ತಿದ್ದರೇನೋ"

"ಅನುಮಾನವೇ ಇಲ್ಲ."

ಸಂಜೆಯಾಯಿತು.

ನಾವು ಸುಮ್ಮನೆ ಕಾಯುತ್ತಾ ಕುಳಿತೆವು.

ಒಂದು ವೇಳೆ ರಾಮಚಂದ್ರನ ತೀರಾ ಪರಿಚಿತರು ಬಂದು ಕೇಳಿದರೆ ? ಈ ನಗರದಲ್ಲಿ ಅವನಿಗೆ ಎಷ್ಟೋ ಮಂದಿ ಸ್ನೇಹಿತರಿರಬಹುದು.

ನಮ್ಮ ಚಡಪಡಿಕೆಗಳಾವುದನ್ನೂ ಲೆಕ್ಕಿಸದೆ ರಾಮಚಂದ್ರ ಮಾತ್ರ ಬಿಳಿಯ ಬಟ್ಟೆಯೊಳಗೆ ಶಾಂತವಾಗಿ ಮಲಗಿದ್ದ.

ಕ್ರಮೇಣ ಕಾಯುವುದಕ್ಕೆ ಅರ್ಥವಿಲ್ಲವೆಂದು ನಮಗನಿಸತೊಡಗಿತು. ಆದರೆ ನಮ್ಮಲ್ಲಿ ಯಾವ ಕೆಲಸಕ್ಕೂ ನಾಯಕತ್ವದ ಕೊರತೆ, ಎಂದಾದರೊಂದು ದಿನ ರಾಮಚಂದ್ರನ ಸಂಬಂಧಿಗಳನ್ನು ಎದುರಿಸಬೇಕೆಂಬ ಅಳುಕು ನಮ್ಮನ್ನೆಲ್ಲಾ ಹಿಂದೆ ಸರಿಸಿತ್ತು.

ಮೌನ ಹೆಚ್ಚಿದಂತೆ ಸತ್ತ ರಾಮಚಂದ್ರ ನಮಗೊಬ್ಬ ಶತ್ರುವಾಗತೊಡಗಿದ. ಕೊಠಡಿಯ ಬಾಗಿಲನ್ನು ಮುಂದುಮಾಡಿ ನಾವು ವರಾಂಡಕ್ಕೆ ಬಂದು ಕುಳಿತು ಕೊಂಡೆವು. ನಮ್ಮಲ್ಲೆಲ್ಲಾ "ಮುಂದೇನು ?" ಎಂಬ ಪ್ರಶ್ನೆ ಬೃಹತ್ತಾಗಿ ಬೆಳೆದಿತ್ತು. ಯಾರಲ್ಲೂ ಉತ್ತರವಿರಲಿಲ್ಲ. ಈ ಮಧ್ಯೆ ಆ ನಿವಾಸದ ಎಲ್ಲಾ ಕೊಠಡಿಗಳ ದೀಪಗಳು ಆರತೊಡಗಿದವು.

ನಾವು ಒಂದಷ್ಟು ಮಂದಿ ಆ ವೇಳೆಗಾಗಲೇ ಒಂದು ಸಂಘವಾಗಿ ಬದಲಾಯಿಸಿದ್ದೆವು.

ಕೊನೆಗೆ ವಾಸಣ್ಣ ನುಡಿದರು, "ಏನೇ ಆಗಲಿ ಇಷ್ಟೆಲ್ಲಾ ನಾವು ಪ್ರಯತ್ನಿಸಿದೆವು. ಇನ್ನು ಹೇಗೂ ಬೆಳಗಾಗಲಿ. ಎಷ್ಟೂಂತ ಕಾಯೋದು"

ಆ ಮಾತು ಎಲ್ಲರಿಗೂ ರುಚಿಸಿತು.

ರಾಮಚಂದ್ರನ ಕೊಠಡಿಯ ಕದಗಳನ್ನು ಭದ್ರಪಡಿಸಿ ನಮ್ಮ ನಮ್ಮ ಕೊಠಡಿಗಳತ್ತ ಸಾಗಿದೆವು.

ಆದರೆ ನಾವು ಕೆಲವರು ಮಾತ್ರ ರಾಮಚಂದ್ರನ ಪಕ್ಕದಲ್ಲೇ ಇರುವ ವಾಸಣ್ಣನ ಕೊಠಡಿಯಲ್ಲಿ ಆ ರಾತ್ರಿ ಕಳೆಯಲು ನಿರ್ಧರಿಸಿದೆವು. ವಾಸಣ್ಣನ ಕೊಠಡಿಯಲ್ಲಿದ್ದ ಮಂಚ, ಕುರ್ಚಿ, ಆರಾಮಕುರ್ಚಿ, ಚಾಪೆ, ನೆಲದ ಮೇಲೆಲ್ಲಾ ನಾವು ಬಿದ್ದುಕೊಂಡೆವು.

ಒಂದು ಹಗಲಿನ ಪೂರ್ಣ ಆಯಾಸ ನಮ್ಮನ್ನು ಬಳಸಿಕೊಂಡಿತ್ತು. ನಿದ್ರೆ ಯಾವಾಗ ಬಂತೆಂಬುದೇ ತಿಳಿಯಲಿಲ್ಲ.

ಕೆಲವು ಗಂಟೆಗಳೇ ಕಳೆದಿರಬಹುದು. ಯಾವುದೋ ಒಂದು ಶಬ್ದ ಕೇಳಿ ನನಗೆ ಎಚ್ಚರವಾಯಿತು. ನಿದ್ರೆಯಿಂದ ಕಣ್ಣು ಬಿಡಲು ಆಗುತ್ತಿರಲಿಲ್ಲ. ಬೀದಿ ದೀಪಗಳ ಹಾಲು ಬೆಳಕು ಕೊಠಡಿಯನ್ನು ಪಸರಿಸಿತ್ತು.

ನಾನು ಮೈಯೆಲ್ಲಾ ಕಿವಿಮಾಡಿದೆ.

ಬಾಗಿಲು ತೆಗೆಯುವ ಶಬ್ದ !

ನಾನು ಪಕ್ಕದಲ್ಲೇ ಮಲಗಿದ್ದ ಕರುಣನನ್ನು ತಿವಿದೆ.

“ ಏನು....ಏನೋ ” ಎನ್ನುತ್ತಾ ಬೆಚ್ಚಿ ಎದ್ದ. “ಏನೋ ಸೌಂಡು ಕಣೋ. ಬಾಗಿಲು ತೆಗೆಯುವ ಹಾಗೆ. ಪಕ್ಕದಿಂದಲೇ ಇರಬೇಕು” ನನ್ನ ಗಂಟಲು ನಡುಗುತ್ತಿತ್ತು.

“ನಿನಗೆ ಹಾಗೆ ಅನ್ನಿಸಿರಬೇಕು. ಸುಮ್ನೆ ಮಲಕ್ಕೋ” ಎಂದು ಕರುಣ ಕುಕ್ಕುರು ಗಾಲಿನಲ್ಲಿ ಕುಳಿತು ತಾನುಟ್ಟಿದ್ದ ಪಂಚೆಯನ್ನು ಬಿಚ್ಚಿ ಹೊದೆದುಕೊಂಡು ಮಲಗುವ ಪ್ರಯತ್ನ ನಡೆಸುತ್ತಿದ್ದ.

“ಏ ಬಾರೋ....ನೋಡ್ಕೊಂಡೇ ಬಂದುಬಿಡೋಣ'' ನಾನು ಒತ್ತಾಯಿಸಿದೆ. ಆಲಸ್ಯದಿಂದ ಕರುಣ ರೆಪ್ಪೆಗಳನ್ನುಜ್ಜುತ್ತಾ ಕಣ್ಣು ಬಿಡಲು ಪ್ರಯತ್ನಿಸಿದ.

ಅಷ್ಟರಲ್ಲಿ ವಾಸಣ್ಣ ಎದ್ದು ದೀಪದ ಗುಂಡಿ ಅದುಮಿದ. ನಾವು ಮೂವರೂ ಹೊರಗೆ ಬಂದೆವು.

ನಮ್ಮ ಕೈಕಾಲುಗಳು ನಡುಗಿ ಹೋದವು.

ರಾಮಚಂದ್ರನ ಕೊಠಡಿಯ ದೀಪ ಉರಿಯುತ್ತಿತ್ತು.

ನಾವು ಒಳಕ್ಕೆ ಹೆಜ್ಜೆಯಿಟ್ಟೆವು.

“ಹಾಂ...” ಕರುಣ ಮೊದಲು ಉದ್ಗರಿಸಿದ. ಜೊತೆಗೆ ನಾನೂ...

ವಾಸಣ್ಣ ಬಿಳಿಚಿಕೊಂಡಿದ್ದ.

ಕಾರಣ—ರಾಮಚಂದ್ರನ ಶವ ಅಲ್ಲಿರಲಿಲ್ಲ. ಬೇಗಂ, ಟೈಯೂ ನಾಪತ್ತೆ.

ನಿಧಾನವಾಗಿ ನಿವಾಸದ ಕೊಠಡಿಗಳೆಲ್ಲಾ ಬೆಳಗಿದವು. ಯಾರ್ಯಾರೋ ಓಡಿ ಬಂದು ಮರಗಟ್ಟಿದ ನಮ್ಮನ್ನು ಎಚ್ಚರಿಸಿದರು.

"ನಾವು ಲೆಕ್ಕಾಚಾರ ಮಾಡಿದ ಹಾಗೆ ಆಗಲೇ ಇಲ್ಲ." ಕುಟ್ಟನ ಧ್ವನಿಯಲ್ಲಿ ನೋವಿತ್ತು, "ಅವನು ಕೊನೆಗೂ ಅವನ ದಾರಿಯನ್ನೇ ಹಿಡಿದ...."

ಬೆಳಗಾಗುವತನಕ ನಾವು ಹಾಗೆಯೇ ಕುಳಿತೆವು. ನಮಗೆ ಪರಸ್ಪರ ಕೇಳಲಿಕ್ಕಾಗಲೀ, ಹೇಳುವುದಕ್ಕಾಗಲಿ ಏನೂ ಇರಲಿಲ್ಲ. ಅವುಗಳೆಲ್ಲವೂ ಈಗ ಅರ್ಥ ಕಳೆದುಕೊಂಡಿದ್ದವು.

ರಾಮಚಂದ್ರನ ಶವವನ್ನು ಹುಡುಕಬೇಕೆಂದಾಗಲೀ, ಹೇಗೆ ಕೊಲೆಯಾಯಿತೆಂಬ ಗುಟ್ಟು ತಿಳಿಯಬೇಕೆಂಬ ಕುತೂಹಲವಾಗಲೀ ನಮಗಾಗಲಿಲ್ಲ.

ಏನೂ ತೋರದೆ, ಏನನ್ನೂ ಯೋಚಿಸಲಿಕ್ಕಾಗದೆ ನಾವು ನಮ್ಮ ಪಾಡಿಗೆ ಮುದುಡಿ ಕುಳಿತುಕೊಂಡೇ ಇದ್ದೆವು.

ಬೆಳಗಿನ ಎಂಟೊ, ಒಂಭತ್ತು ಗಂಟೆಯಿರಬೇಕು. ಕುಟ್ಟಿ ಓಡೋಡಿ ಬಂದ. ಏದುಸಿರು ಬಿಡುತ್ತಿದ್ದ. ಸ್ವಲ್ಪ ಸಮಯ ಅವನ ಬಾಯಿಯಿಂದ ಮಾತೇ ಹೊರಡಲಿಲ್ಲ.

"ಸೇತುವೆಯ ಕೆಳಗೆ...." ಅವನು ಹೇಳತೊಡಗಿದ, "....ಒಂದು ಹೆಣ ತೇಲುತ್ತಿದೆ."

"ಹಾಂ...."

"ರಾಮಚಂದ್ರರವರದಂತೆ...."

ನಾವು ಸೇತುವೆಯ ಬಳಿಗೆ ಓಡಿದೆವು.

ಹೆಣವನ್ನು ದಡಕ್ಕೆ ಸೇರಿಸಲಾಗಿತ್ತು. ಸುತ್ತಲೂ ಒಂದು ಸಣ್ಣ ಗುಂಪು. ಕಪ್ಪು ಪ್ಯಾಂಟ್ ಮತ್ತು ಬಿಳಿಯ ಷರ್ಟ್. ಕುತ್ತಿಗೆಯಲ್ಲಿ ಟೈ, ಕಾಲಿನಲ್ಲಿ ಷೂಸ್, ಬೆರಳುಗಳು ದಪ್ಪನೆಯ ಚೀಲವನ್ನು ಹಿಡಿದಿದ್ದವು.

ಹೊಟ್ಟೆಯುಬ್ಬಿ ನೀರು ಕುಡಿದಂತಿತ್ತು.

ಪೋಸ್ಟ್‌ಮಾರ್ಟಂ ಮುಗಿದು ಫಲಿತಾಂಶ ಬಂದಾಗ ಮಧ್ಯಾಹ್ನವಾಗಿತ್ತು.

"ಇದು ಆತ್ಮಹತ್ಯೆ...." ಡಾಕ್ಟರಿಗೆ ಯಾವ ಅನುಮಾನವೂ ಇರಲಿಲ್ಲ.

ನಾವು ಕಣ್ಣು ಬಿಟ್ಟು ನೋಡುತ್ತಿರುವುದನ್ನು ಗಮನಿಸಿ, ನಮ್ಮನ್ನು ಕ್ರೂರವಾಗಿ ನೋಡುತ್ತಾ ಅವರು ಕೇಳಿದರು "ಏನು ಸಂದೇಹಾನಾ?"

ನಾವು ಸಾಮೂಹಿಕವಾಗಿ 'ಇಲ್ಲ' ಎಂದು ತಲೆಯಾಡಿಸಿದೆವು.

ನಮಗಾರಿಗೂ ಡಾಕ್ಟರರ ಮಾತಿನಲ್ಲಿ 'ಅನುಮಾನ'ವೇ ತೋರಲಿಲ್ಲ.

ಏಕೆಂದರೆ ರಾಮಚಂದ್ರನದು ತೀರ ಸ್ವಾಭಾವಿಕವಾದ ಅಂತ್ಯವಾಗಿತ್ತು.

ಮಲೆಯಾಳಂನಿಂದ : **ಕೆ.ಕೆ ಗಂಗಾಧರನ್**

# ಕನ್ನಡ ರಂಗಭೂಮಿಯ ಆಯಾಮಗಳು

ಪ್ರೊ. ಬಿ. ಚಂದ್ರಶೇಖರ್

ಕನ್ನಡ ರಂಗಭೂಮಿಯ ಕಳೆದ 25 ವರ್ಷಗಳ ಬೆಳವಣಿಗೆಯನ್ನು ವಿಶ್ಲೇಷಿಸ ಹೊರಟು ಈ ಲೇಖನವನ್ನು ಬರೆಯುತ್ತಿದ್ದೇನೆ. ತನ್ನದೇ ಒಂದು ಪರಂಪರೆಯನ್ನು ಕಂಡುಕೊಂಡು ಕನ್ನಡ ರಂಗಭೂಮಿ ತನ್ನ ಗುಣಧರ್ಮಕ್ಕೆ ತಕ್ಕಂತೆ ಪಡೆದುಕೊಂಡ ಬೆಳವಣಿಗೆಯನ್ನು ಗುರುತಿಸುವುದು ಇಲ್ಲಿನ ಉದ್ದೇಶ.

ಕನ್ನಡ ರಂಗಭೂಮಿಯನ್ನು ಮುಖ್ಯವಾದ ಮೂರು ವಿಭಾಗಗಳಲ್ಲಿ ಅಭ್ಯಾಸ ಮಾಡಬಹುದು. ಒಂದು–ಜಾನಪದ ರಂಗಭೂಮಿ. ಎರಡು–ವೃತ್ತಿ ಪರ ರಂಗಭೂಮಿ, ಮೂರು–ಹವ್ಯಾಸೀ ರಂಗಭೂಮಿ. ಈ ಎಲ್ಲಾ ಪ್ರಾಕಾರಗಳೂ ಬದಲಾವಣೆಯನ್ನು ಪಡೆದುಕೊಂಡು ತನ್ನದೇ ಆದ ವಿಶಿಷ್ಟ ಸ್ಥಾನವನ್ನುಗಳಿಸಿಕೊಂಡಿದೆ. ಕೆಲವು ಬದಲಾವಣೆಗಳು ಒಳ್ಳೇದಕ್ಕೂ, ಕೆಲವು ಕೆಟ್ಟದ್ದಕ್ಕೂ ಆಗಿವೆ. ಒಂದಲ್ಲ ಒಂದು ರೀತಿಯ ಸಮಕಾಲೀನ ಸ್ಪಂದನದ ಎಚ್ಚರಿಕೆ ಎಲ್ಲಕ್ಕೂ ಇರುವುದರಿಂದ ಒಟ್ಟಾರೆ ಇನ್ನೂ ಭರವಸೆ ಉಳಿಸಿಕೊಂಡಿರುವುದಾಗಿದೆ. ಎಲ್ಲವೂ ವಿಭಿನ್ನ ಮಾರ್ಗದಲ್ಲಿ ಬೆಳವಣಿಗೆಯನ್ನು ಕಂಡುಕೊಂಡಿವೆ.

1. **ಜಾನಪದ ರಂಗಭೂಮಿ**: ಪಾರಂಪರಿಕ ರಂಗಭೂಮಿ ಎಂದೂ ಕರೆಯಬಹುದಾದ ಇದನ್ನು ಯಕ್ಷಗಾನ–ಬಯಲಾಟ ಎಂಬ ಎರಡು ಮುಖ್ಯ ಪ್ರಕಾರಗಳ ಮೂಲಕ ಅಭ್ಯಸಿಸಬೇಕಾಗುತ್ತದೆ. ಬಯಲಾಟವೂ ದೊಡ್ಡಾಟ, ಸಣ್ಣಾಟ ಎಂದು ಎರಡು ರೀತಿ ಇದೆ ಕರ್ನಾಟಕದಲ್ಲಿ ಈ ಪಾರಂಪರಿಕ ರಂಗಭೂಮಿಯೇ ಮೂಲ ರಂಗ ಕಲೆಯಾಗಿದೆ. ಹಿಂದೆ ಬಯಲಾಟ ವಿಸ್ತಾರವಾಗಿ ಹರಡಿಕೊಂಡಿತ್ತು. ಜೊತೆಗೆ ತನ್ನದೇ ಆದ ರೆಪರ್ಟರಿಯನ್ನೂ ಹೊಂದಿತ್ತು.

ಹಾಗೇ ವೃತ್ತಿಪರ ರಂಗಭೂಮಿ ಎದುರಿಸಿದ ಕಷ್ಟವನ್ನೂ ಎದುರಿಸಿತು. ಈ ಬಯಲಾಟ ಅವಶ್ಯವಾಗಿ ಯಕ್ಷಗಾನದಂತೆ ಒಂದು ಹವ್ಯಾಸಿ ರಂಗಕ್ರಿಯೆ.

ವೃತ್ತಿಪರ ರಂಗಭೂಮಿಯೊಡನೆ ಹೋಲಿಸಿದಾಗ ಅವರ ಪಡಿರೂಪವಾದ ಈ ಬಯಲಾಟ ಜನರಿಗೆ ತಿಳುವಳಿಕೆ ಕೊಡುವಲ್ಲಿ ಅಪಕ್ವ ಎನಿಸುತ್ತದೆ. ನಾಟಕದ ಸಾಹಿತ್ಯವನ್ನು ಕುರಿತ ಮಾತಲ್ಲ ಇದು. ನಟನೆಯ ರೀತಿ, ಪ್ರಯೋಗದ ರೀತಿ, ಮುಂತಾದವುಗಳು ಅತೀ ಸಾಂಪ್ರದಾಯಿಕವಾಗಿ, ಹೊಸ ಬಗೆಯ ಹವ್ಯಾಸಿ ರಂಗ ಭೂಮಿಗೆ ಸಮನಾಗದೇ ಈ ಜಾನಪದ ಕಲೆಯಾದ ಯಕ್ಷಗಾನ-ಬಯಲಾಟಗಳು ಪ್ರಯೋಗಶೀಲತೆಯಲ್ಲಿ ಹಿಂದವಾಗಿ ಸಪ್ಪೆಯಾಗುತ್ತಿರುವುದರ ಬಗೆಗಿನ ಮಾತು ಇದು. ಈ ಪ್ರಯೋಗಗಳು ಸಂಭಾಷಣೆಯ ಘರ್ಷಣೆಯನ್ನೇ ಅರ್ಥಮಾಡಿಸುವ ಸಾಧನವಾಗಿ ಬಳಸುವಂಥವು. ಈ ತಪ್ಪು ಗ್ರಹಿಕೆ ಸಂಪ್ರದಾಯವಲ್ಲದ, ಸಾಮಾ ಜಿಕ ವಿಮರ್ಶೆಯ ಗುರಿಯನ್ನು ಹೊಂದಿದ ಇತ್ತೀಚಿನ ನಾಟಕಗಳಲ್ಲಿಯೂ ಕಂಡು ಬರುತ್ತಿದೆ. ಈ ಬಯಲಾಟಕ್ಕೆ ಸಮಕಾಲೀನ ರೂಪಕೊಡಲು ಪ್ರಯತ್ನ ನಡೆಯು ತ್ತಿದೆ. ಬಯಲಾಟದ ಸಂಗೀತದ ಲಾಘವತೆಯನ್ನು ನೃತ್ಯದ-ತಾನದ ಧೀರ ಗಂಭೀರತೆಯನ್ನು ಹೊಸ ನಾಟಕಗಳಲ್ಲಿ ಅಳವಡಿಸಿಕೊಳ್ಳುವುದರ ಮೂಲಕ ಬಯ ಲಾಟಕ್ಕೆ ಹೊಸ ರೂಪವನ್ನು ಕೊಡಲು ಪ್ರಯತ್ನ ನಡೆಯುತ್ತಿದೆ. ಈ ಪ್ರಯತ್ನ ಎಲ್ಲಿಯವರೆಗೋ, ತೀರ್ಮಾನ ಈಗಲೇ ಸಾಧ್ಯವಿಲ್ಲ.

ಯಕ್ಷಗಾನ ನಮ್ಮ ರಾಜ್ಯದ ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಂಗ ಳೂರು ಮುಂತಾದ ಜಿಲ್ಲೆಗಳಿಗೆ ಮಾತ್ರ ಸೀಮಿತವಾಗಿದೆ. ಬಯಲಾಟದಂತೇ ಇದೂ ಹವ್ಯಾಸೀ ರಂಗಕ್ರಿಯೆ ಆಗಿದ್ದೂ ಶ್ರೇಷ್ಠ ವೃತ್ತಿಪರತೆಯ ಗುಣ, ಸಾಮರ್ಥ್ಯಗಳನ್ನು ಹೊಂದಿದೆ. ಈ ಗುಣ ಬಯಲಾಟಕ್ಕಿಲ್ಲ. ಈ ಕಲೆಗೆ ಹತ್ತಿರ ವಾದ ವಿದ್ವಾಂಸರು, ಮತ್ತು ಕಲಾಕಾರರು ಈ ಸಾಂಪ್ರದಾಯಿಕ ನಾಟಕ ರೂಪಕ್ಕೆ ಹೊಸ ರೀತಿಯ ಜನಪ್ರಿಯ ರೂಪವನ್ನು ಕೊಡಲು ಪ್ರಯತ್ನಿಸುತ್ತಿದ್ದಾರೆ. ಈಚೆಗೆ ಯಕ್ಷಗಾನಗಳು ನಗರಗಳಲ್ಲಿಯೂ ಹೊರದೇಶಗಳಲ್ಲಿಯೂ ಪ್ರದರ್ಶಿಸಲ್ಪಡುತ್ತಿವೆ. ದುರಾದೃಷ್ಟವಶಾತ್ ಈ ಯಕ್ಷಗಾನ ಕಲಾವಿದರುಗಳು ಕಲೆಯ ಮೂಲ ರೂಪ ವನ್ನು ಹಾಗೇ ಉಳಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಇದರ ವಸ್ತುಗಳು ನಮ್ಮ ಪುರಾಣ ಕಥೆಗಳ ಆಧಾರದ ಮೇಲೆ ಇರುತ್ತದೆ. ಅವುಗಳಿಗೆ ಸಮಕಾಲೀನ-ಸಾಮಾಜಿಕ ವಸ್ತುವನ್ನು ಸೇರಿಸಲು ಇಚ್ಛೆಪಡುವುದಿಲ್ಲ. ಹೀಗೆ ಕಳೆದ ಹದಿನೈದು ವರ್ಷಗಳಲ್ಲಿ ಪ್ರಯೋಗವಾದ ಅಪಾರಂಪರಿಕ ಪ್ರಯೋಗಗಳು ಯಶಸ್ವಿಗಳಾಗಿಲ್ಲ.

**2. ವೃತ್ತಿಪರ ರಂಗಭೂಮಿ :** ಇದು ಹಿಂದೆ ಹವ್ಯಾಸಿಯಾಗಿ ಪ್ರಾರಂಭಗೊಂಡುದೇ. ಕ್ರಿ. ಶ. 1874 ರಲ್ಲಿ ಕರ್ನಾಟಕದ ಕೆಲವು ಉತ್ಸಾಹೀ ತರುಣರು ಬೆಳಗಾಂ ಜಿಲ್ಲೆಯ ಹಲಸಗಿಯಲ್ಲಿ ಪ್ರಾರಂಭಿಸಿದರು. ಇದರೊಂದಿಗೆ ಮೈಸೂರಿನ ಮಹಾರಾಜರ ಆಸ್ಥಾನದ ನಟರುಗಳು ಪ್ರಾರಂಭಿಸಿದರು. ಈ ಜನಗಳ ಪ್ರಯೋಗ ಪ್ರಭಾವದಿಂದ ರಾಜ್ಯದಾದ್ಯಂತ ಲೆಕ್ಕವಿಲ್ಲದಷ್ಟು ನಾಟಕ ಕಂಪನಿಗಳು ತೀವ್ರಗತಿಯಲ್ಲಿ ಹುಟ್ಟಿಕೊಂಡವು. 1900-1935 ರವರೆಗಿನ ಕಾಲ ದಲ್ಲಿ ಇವು ನಿಧಾನವಾಗಿ ಬೆಳೆಯಿತು. ಸಂಗೀತದ ಆಕರ್ಷಕಗುಣ, ವೈಭವೀಕೃತ ಸೆಟ್ಟಿಂಗುಗಳು, ಓತಃಪ್ರೋತವಾಗಿ ಹರಿಯುವ ಸಂಭಾಷಣೆಯ ಚಮತ್ಕಾರಗಳು, ಉಸಿರುಕಟ್ಟಿಸುವ ನಾಟಕದ ಗಿಮಿಕ್ಸ್‌ಗಳು ಮುಂತಾದವುಗಳಿಂದ ಇದರ ಪ್ರಯೋಗ ಪ್ರೌಢಿಮೆ, ಮಾನ್ಯತೆ ಪಡೆದಿತ್ತು. ಇಂದು ಈ ವೃತ್ತಿಪರ ರಂಗಭೂಮಿ ಶೋಚನೀಯ ಪರಿಸ್ಥಿತಿಯಲ್ಲಿದೆ. ನೂರಾರು ಕಂಪನಿಗಳು ಉರುಳಿ ಆರೇಳು ಕಂಪನಿಗಳು ಉಳಿದುಕೊಳ್ಳಲು ಕಷ್ಟ ಪಡುತ್ತಿವೆ. ಈ ಅವನತಿಗೆ ಸಾಕಷ್ಟು ಕಾರಣಗಳೂ ಕೊಡುಗೆ ಕೊಟ್ಟಿವೆ. ಇದು ಭಾಗಶಃ ಸಾವನ್ನು ಕಾಣಲು ಹಣದ ಮುಗ್ಗಟ್ಟು ಪ್ರಮುಖ ಕಾರಣ. ಒಂದು ಪ್ರದರ್ಶನ ಆರರಿಂದ ಹದಿನೈದು ಸಾವಿರದವರೆಗೆ ತಿಂದರೆ ಹಣ ಹೊಂದಿಸುವುದು ಹೇಗೆ ? ಇದು ಹವ್ಯಾಸೀ ಆಸಕ್ತರುಗಳಿಗೂ ಗೊತ್ತಿರುವುದೇ ಆಗಿದೆ ವೃತ್ತಿಪರರಂತೂ ನಟರುಗಳಿಗೆ ಮತ್ತು ಮಿಕ್ಕವರಿಗೆ ತಪ್ಪದೇ ಸಂಬಳವನ್ನು ಕೊಡಲೇಬೇಕು. ಇಡೀ ಕಂಪನಿ ಯನ್ನು ಊರಿಂದ ಊರಿಗೆ ಹೊತ್ತೊಯ್ಯುವ ಸಂದರ್ಭದಲ್ಲಿ ಸಾರಿಗೆ ವೆಚ್ಚವನ್ನು ಭರಿಸಬೇಕಾಗುತ್ತದೆ. ಇನ್ನೊಂದು ಅಂಶವೆಂದರೆ ನಿರ್ದೇಶನದ ಜವಾಬ್ದಾರಿಯುತ ಪ್ರಯೋಗಗಳನ್ನು ಇದು ಮಾಡದಿರುವುದರಿಂದ ಬುದ್ಧಿಜೀವಿಗಳ ಕಡೆಗಣಿಕೆಗೂ ಪಾತ್ರವಾಗಿದೆ. ಬುದ್ಧಿವಂತ ನಾಟಕಕಾರರು ಮತ್ತು ಪ್ರೇಕ್ಷಕರು ಇದನ್ನು ಗಣ ನೆಗೆ ತೆಗೆದುಕೊಳ್ಳುವುದಿಲ್ಲ. ಮುಖ್ಯವಾಗಿ ಇಂದಿನ ಸಂದರ್ಭದಲ್ಲಿ ಇವುಗಳು ವ್ಯಾಪಾರೀ ಚಲನಚಿತ್ರಗಳೊಡನೆ ಸ್ಪರ್ಧಿಸಬೇಕಾಗಿರುವುದು ಅತ್ಯಂತ ದುರಾದೃಷ್ಟ. ರಂಗಸಾಧ್ಯತೆಯ ಅಂಶವನ್ನು ಹೆಚ್ಚಿಸಿಕೊಳ್ಳುವ ಬದಲು ಸಿನಿಮಾ ಗಿಮಿಕ್ಸ್‌ಗಳನ್ನು ಬಳಸಿ ಕೊಂಡುದೇ ತಪ್ಪು. ಸಿನಿಮಾ ಮಾಡುವ ಕೆಲಸ ನಾಟಕಕ್ಕೆ ಖಂಡಿತಾ ಮಾಡಲಾಗುವುದಿಲ್ಲ. ವೃತ್ತಿಪರರು ಈ ಸ್ಪಷ್ಟ ವ್ಯತ್ಯಾಸವನ್ನು ಗಮನಿಸುವುದು ಅವಶ್ಯಕ. ಇಲ್ಲದಿದ್ದರೆ ಶೀಘ್ರದಲ್ಲಿಯೇ ಅತ್ಯಂತ ಶೋಚನೀಯ ಸಾವನ್ನು ಎದುರಿಸ ಬೇಕಾಗಬಹುದು. ಆದರೆ ಅದನ್ನು ಸಾಯಲು ಬಿಡಬಾರದು ಅಂದಮಾತ್ರಕ್ಕೆ ಹಾಗೇ ಉಳಿಸಿಕೊಳ್ಳಬೇಕೆಂದೇನೂ ಅಲ್ಲ. ಬದಲಾಗಿ ಹೊಸ ರೂಪವನ್ನು ಕೊಡಬೇಕು. ಇವು ಗಂಭೀರ ವಸ್ತು ವಿಷಯಗಳನ್ನು ಆಧರಿಸಿ, ರಂಗಸಾಧ್ಯತೆಯ ಜಾಣ್ಮೆಯನ್ನು

ಪ್ರದರ್ಶಿಸಿ ಬೆಳೆಯುತ್ತಾ ಬಂದರೆ ಕಲೆಯ ಮೇಲಿನ ಅಭಿಮಾನದಿಂದ ವೃತ್ತಿಪರರಾದ ಕಲಾವಿದರೂ ಉಳಿಯುತ್ತಾರೆ, ವೃತ್ತಿಪರ ರಂಗಭೂಮಿಯೂ ಉಳಿಯುತ್ತದೆ. ಈಚಿನ ವರ್ಷಗಳಲ್ಲಿ ಹವ್ಯಾಸಿ ರಂಗಭೂಮಿಯಲ್ಲಿ ನಾಟಕಗಳನ್ನು ನಿರ್ದೇಶಿಸುತ್ತಾ ಅನ್ಯವೃತ್ತಿಯ ಗೋಜಿಗೆ ಹೋಗದವರು ಒಟ್ಟಾಗಿ ಕಲೆತು ವೃತ್ತಿರಂಗವನ್ನು, ಆ ರಂಗಭೂಮಿಯ ಪ್ರಮುಖರೊಂದಿಗೆ ಕಟ್ಟಬೇಕಾಗಿದೆ. ಸರ್ಕಾರ ಕೂಡಾ ಇದನ್ನು ಗುರ್ತಿಸಿ ಪ್ರೋತ್ಸಾಹಿಸಬೇಕಾಗಿದೆ. ಒಂದು ಕಾಲದಲ್ಲಿ ಅಮೇರಿಕಾದಲ್ಲಿ ಆದಂತೆ ಕಡೆಗಣಿಸಲ್ಪಟ್ಟ ಕಂಪನಿಗಳು ಮತ್ತು ನಟರುಗಳನ್ನು ಸರ್ಕಾರ ರಕ್ಷಿಸಬೇಕಾಗಿದೆ. ಜೊತೆಗೆ ಅದರ ದುರದೃಷ್ಟಕರ ಇತಿಹಾಸ ಮತ್ತೆ ಮರುಕಳಿಸದಂತೆ ನೋಡಿಕೊಳ್ಳಬೇಕಾಗಿದೆ

3. **ಹವ್ಯಾಸೀ ರಂಗಭೂಮಿ :** ಇದರ ಅವಲಂಬಿಗಳಲ್ಲಿ ನಾನೂ ಒಬ್ಬನಾದ ಕಾರಣ ಇದರ ಬಗ್ಗೆ ಹೆಚ್ಚು ಹೇಳದೇ ವಿಧಿಯಿಲ್ಲ ಮತ್ತೆ ಇಲ್ಲೇ ಹೆಚ್ಚಿನ ಸಂಖ್ಯೆಯಲ್ಲಿ ಚಿಂತನಶೀಲ ನಾಟಕಗಳು ಪ್ರದರ್ಶನ ಕಂಡಿವೆ. ಅವುಗಳಲ್ಲಿ ಕೆಲವು ಶ್ರೇಷ್ಠವಾಗಿಯೂ ಪ್ರದರ್ಶಿತವಾದವು. ಈ ನಾಟಕಗಳೇ ಸಮಕಾಲೀನ ಸಾಮಾಜಿಕ, ರಾಜಕೀಯ ಬೇನೆಗಳ ಹುಡುಕಾಟ ನಡೆಸಿರುವುದೂ ಕೂಡಾ. ನಾಟಕ ಕಲೆಯ ಬಹುಮುಖ್ಯ ಪ್ರಯೋಗಗಳು ನಡೆದಿರುವುದೂ ಇಲ್ಲೇ. ಸಮಕಾಲೀನ ವಸ್ತು ವಿಷಯವನ್ನು, ತಂತ್ರ ಸಾಧನೆಗಳನ್ನು, ಉನ್ನತಮಟ್ಟದಲ್ಲಿ ದುಡಿಸಿಕೊಂಡಿರುವುದೂ ಇದೇ. ಈ ಮೂವತ್ತು, ಐವತ್ತು ವರ್ಷಗಳ ನಾಟಕ ಬೆಳವಣಿಗೆ ಗಮನಿಸಿದಾಗ ಈ ಹವ್ಯಾಸೀ ಪ್ರಾಕಾರ ಉಜ್ವಲವಾದ ಬೆಳವಣಿಗೆ ಕಂಡುಕೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ. ಮಿಕ್ಕ ಪ್ರಾಕಾರಗಳಾದ ವೃತ್ತಿಪರ, ಅಥವಾ ಜಾನಪದ ರಂಗಭೂಮಿ ಇದರ ಮುಂದೆ ಸಪ್ಪೆ ಎನಿಸುತ್ತದೆ. ಒಬ್ಬ ಖ್ಯಾತ ಕನ್ನಡ ನಾಟಕಕಾರ ತನ್ನ ಯೌವನದ ಬರವಣಿಗೆಗಳಲ್ಲಿ ಕನ್ನಡ ನಾಟಕಕ್ಕೆ ಉಸಿರು ತುಂಬಿಸಲು ಅವಿರತವಾಗಿ, ಅವಿಶ್ರಮದಲ್ಲಿ ದುಡಿದವನು—ಹೇಳುತ್ತಾನೆ : ‘ಈ ಹವ್ಯಾಸೀ ರಂಗಭೂಮಿಯಿಂದಲೇ ಕನ್ನಡದ ನಾಟಕಕಲೆ ಬಹಳ ದಿನಗಳ ತನಕ ಉಳಿಯಲು ಸಾಧ್ಯ’ ಎಂದು.

ಈ ಶತಮಾನದ ಮುವ್ವತ್ತರ ದಶಕದ ಸರಿಸುಮಾರು ಈ ಹವ್ಯಾಸೀ ರಂಗಭೂಮಿ ಅಸ್ತಿತ್ವಕ್ಕೆ ಬಂತೆಂದು ಹೇಳಬಹುದು. ಇಲ್ಲಿನ ಜನಗಳು ವಿದ್ಯಾವಂತರಾಗಿದ್ದರು. ಅವರಲ್ಲಿ ಇಬ್ಬರು ಪಾಶ್ಚಾತ್ಯ ನಾಟಕದ ನಿಕಟ ಅಭ್ಯಾಸ, ಸಂಬಂಧಗಳನ್ನು ಇಟ್ಟುಕೊಂಡವರು. ಅವರುಗಳು ನಾಟಕ ಬರೆದು ಆಡಿಸುತ್ತಿದ್ದರು. ಸ್ಕೂಲು ಕಾಲೇಜುಗಳು ಹೆಚ್ಚು ಪ್ರಮಾಣದಲ್ಲಿ ಪ್ರದರ್ಶನಗಳನ್ನು ಕಾಣುತ್ತಿದ್ದವು.

ಈ ಹವ್ಯಾಸಿಗಳು ಪಟ್ಟಣ, ದೊಡ್ಡ ದೊಡ್ಡ ಊರುಗಳಲ್ಲಿ ಮಾತ್ರ ಸೀಮಿತವಾಗಿ ಹಬ್ಬಿದ್ದರು. ಪ್ರಯೋಗಗಳೆಲ್ಲಾ ಬೆಳವಣಿಗೆಯಲ್ಲಿ ಪ್ರಾಥಮಿಕ ಹಂತದ ಮತ್ತು ತೀರ ಹವ್ಯಾಸಿ ರೀತಿಯವುಗಳಾಗಿದ್ದವು. ತರಬೇತಿ ಇಲ್ಲದ, ಪ್ರತಿಭಾವಂತ ನಟರು ಗಳು ಸಾದಾರಂಗದ ಮೇಲೆ ಕಪ್ಪು-ಬಿಳಿ ಪರದೆಗಳೊಡನೆ ಝಗ ಝಗಿಸುವ ಬೆಳಕಿನಲ್ಲಿಯೇ ನಾಟಕವಾಡಿರುವುದೂ ಉಂಟು. ಅವರ ನಾಟಕದ ಉಡುಪುಗಳಲ್ಲಿ ಐತಿಹಾಸಿಕ ಪ್ರಾಮಾಣಿಕತೆ ಕಂಡು ಬಂದರೂ ವಸ್ತುವಿನಲ್ಲಿ ಸಮಕಾಲೀನ ಸಾಮಾಜಿಕ ಪ್ರಜ್ಞೆ ಇದ್ದುದು ಕಂಡುಬರುತ್ತದೆ. ಇವರು Settingಗಳಿಗೆ, ಬೆಳಕಿನ ಆಟ ಗಳಿಗೆ, ವಿಜೃಂಭಿಸುವ ನಾಟಕ ಪರಿಕರಗಳಿಗೆ ಪ್ರಾಮುಖ್ಯತೆ ಕೊಡಲಿಲ್ಲ. Grouping, Blocking, Movement, Timing, ಮತ್ತು Tempo ಗಳಿಗೆ ಹೆಚ್ಚು ಪ್ರಾಮುಖ್ಯತೆ ಇರುತ್ತಿದ್ದಿತು. ಆ ಕಾಲದ ಪ್ರದರ್ಶನ ಪ್ರತಿಭೆ ಈಗಿನ ನಾಟಕದ ತಾಂತ್ರಿಕ ಬೆಳವಣಿಗೆಗಿಂತ ಹಿಂದೆ ಏನೂ ಬಿದ್ದಿರಲಿಲ್ಲ.

ಈ ಹವ್ಯಾಸೀರಂಗ ಜನಗಳಲ್ಲಿ ಆಸಕ್ತಿ ಮೂಡಿಸಿದ್ದು, ಮತ್ತು ಹೆಚ್ಚು ಜನ ಪ್ರಿಯವಾದದ್ದು, ಅದರ ಸಮಕಾಲೀನತೆ ಮತ್ತು ಸರಳತೆಯಿಂದಲೇ. ಬಹಳಷ್ಟು ನಾಟಕಗಳು ಇದಕ್ಕಾಗಿಯೇ ಬರೆಯಲ್ಪಟ್ಟವು ಮತ್ತು ಅನುವಾದಿಸಲ್ಪಟ್ಟವು. ಇಂದಿಗೂ ಇವರು ಅನುವಾದದ ಕಡೆಗೇ ವಾಲುತ್ತಿದ್ದಾರೆ. ಕಾರಣ ಸ್ಪಷ್ಟ: ಕನ್ನಡದ ನಾಟಕಗಳ ಪೂರೈಕೆ ಪ್ರದರ್ಶನಗಳಿಗೆ ಸಮನಾಗಿ ಇಲ್ಲದಿರುವುದೇ ಆಗಿದೆ.

ಹಿಂದೆ ಪ್ರಾರಂಭದ ಹಂತದಲ್ಲಿ ಇವು ಕ್ಲಬ್‌ಗಳು, ಕಾಲೇಜ್‌ಗಳಿಗೆ ಮಾತ್ರ ಸೀಮಿತವಾದದ್ದು ಈಗ ಆಸಕ್ತರು ತಮ್ಮದೇ ಆದ ತಂಡವನ್ನು ಕಟ್ಟಿಕೊಳ್ಳುವವರೆಗೆ ಬೆಳೆದಿದೆ. ಇಲ್ಲಿನ ಜನಗಳು ಕಾರ್ಖಾನೆ, ಬ್ಯಾಂಕು ಮುಂತಾದಲ್ಲಿನ ನೌಕರರೇ ಆಗಿರುವುದರಿಂದ ಇವರು ಆಡುವ ನಾಟಕದ ವಸ್ತುವು ಸಹಜವಾಗಿ ಅವರುಗಳ ಸಮಸ್ಯೆಯ ಚರ್ಚೆಯಾಗಿರುತ್ತದೆ. ಇವರ ನಾಟಕಗಳು ಬೌದ್ಧಿಕ ಮಟ್ಟದ ವಿಮ ರ್ಶಾತ್ಮಕ ಪ್ರಯೋಗಗಳಾಗಿದ್ದರೂ ನಾಟಕ ಕಲೆಯ ಅತಿನಾಗರಿಕತೆಯ ಅಪಾಯದ ಎಚ್ಚರಿಕೆ ಕೊಡುವುದೂ ಆಗಿರುತ್ತದೆ. ಈಗ ಅವರುಗಳು ಪ್ರೊಸೀನಿಯಂ ಬಿಟ್ಟು ಬೀದಿಗೆ ಬಂದು ಕಾಲೊನಿಗಳಲ್ಲಿ, ಗಲ್ಲಿ, ಕೊಂಪೆಗಳಲ್ಲಿ ಜನರುಗಳ ಮಧ್ಯೆ, ಜನ ರುಗಳ ಅವಶ್ಯಕತೆಯ ನಾಟಕಗಳಾಡುತ್ತಿದ್ದಾರೆ. ಜಿಲ್ಲೆಗಳಲ್ಲಿ, ತಾಲ್ಲೂಕುಗಳಲ್ಲಿ ಸರ್ಕಾರದ ಸಹಾಯಧನವನ್ನು ಪಡೆದು ನಾಟಕೋತ್ಸವಗಳನ್ನು ನಡೆಸುತ್ತಿದ್ದಾರೆ.

ಬಹಳ ಮುಖ್ಯವಾದ ಬೆಳವಣಿಗೆ ಎಂದರೆ, ಈ ಹವ್ಯಾಸೀ ತಂಡಗಳಲ್ಲಿ ನಟನೆಯ ಬಗೆಗೆ ಪ್ರದರ್ಶನದ ಕಲೆಯ ಬಗೆಗೆ, ನಾಟಕ ಶಾಸ್ತ್ರದ ಬಗೆಗೆ ಆಳ ವಾದ ಅಧ್ಯಯನ ನಡೆಯುತ್ತಿರುವುದು ಮತ್ತು ಅದರ ಪ್ರಗತಿಯಲ್ಲಿರುವುದು.

ನಮ್ಮ ಬಹಳಷ್ಟು ಜನ ಹವ್ಯಾಸೀ ನಾಟಕ ತಂಡದ ನಟರುಗಳು ನಿರ್ದೇಶಕರು ಗಳು ದೆಹಲಿಯ ರಾಷ್ಟ್ರೀಯ ನಾಟಕ ಶಾಲೆ, ಬೆಂಗಳೂರು, ಮೈಸೂರು ವಿಶ್ವ ವಿದ್ಯಾಲಯಗಳಲ್ಲಿರುವ ನಾಟಕ ಡಿಪ್ಲೊಮಾ, ಗ್ರಾಜುಯೇಶನ್‌ಗಳನ್ನು ಕಲಿತು ಬಂದವರೇ ಆಗಿದ್ದಾರೆ ಇಷ್ಟೇ ಅಲ್ಲದೆ ಖಾಸಗೀ ನಾಟಕ ತರಬೇತಿಶಾಲೆಯೂ ಬೆಂಗಳೂರಿನಲ್ಲಿದೆ. ಹೀಗೆ ಕಲಿತುಬಂದ ಯುವಕ ಯುವತಿಯರ ಪ್ರತಿಭೆ, ಸಾಧನೆ ಗಳ ಫಲವಾಗಿ ಇಂದಿನ ನಾಟಕ ಪ್ರದರ್ಶನಗಳು ವಸ್ತುವಿನ್ಯಾಸ, ತಾಂತ್ರಿಕ ಗುಣ ಗಳಿಂದ ಶ್ರೇಷ್ಠ ಮಟ್ಟದಲ್ಲಿವೆ. ಕಲಾತ್ಮಕವಾಗಿಯೂ ಬೆಳವಣಿಗೆ ಕಂಡಿದೆ. ಖೇದಕರ ಸಂಗತಿ ಎಂದರೆ ನವ್ಯ ಈಕಲಿತವರು ಜಾನಪದ ಪ್ರಾಕಾರಕ್ಕೆ ಮತ್ತು ವೃತ್ತಿ ರಂಗಭೂಮಿಗೆ ಹೆಚ್ಚಿನ ಆಸ್ಥೆತೋರಿಸುತ್ತಿಲ್ಲ ಮತ್ತು ಅವುಗಳನ್ನು ಬಲಪಡಿಸು ತ್ತಿಲ್ಲ. ಇತ್ತೀಚಿನ ಪ್ರಮುಖ ಬೆಳವಣಿಗೆ ಎಂದರೆ ಹೊಸ ಹೊಸ ನಾಟಕ ನಿರ್ದೇಶಕರುಗಳು ಹುಟ್ಟಿಕೊಂಡಿದ್ದು. ಇಂದು ಈ ರಂಗಭೂಮಿ ನಿರ್ದೇ ಶಕನ ಪ್ರಾಮುಖ್ಯತೆ ಮತ್ತು ಅವಶ್ಯಕತೆಗಳನ್ನು ಕಂಡುಕೊಂಡಂತೆ ಹಿಂದೆ ಕಂಡಿರಲಿಲ್ಲ. ಇದು ದುರಾದೃಷ್ಟವಶಾತ್ ಜಾನಪದ ರಂಗಭೂಮಿಯಲ್ಲಿ ಮತ್ತು ವೃತ್ತಿರಂಗಭೂಮಿಯಲ್ಲಿ ಕಾಣಲಿಲ್ಲ. ಅವುಗಳು ಹಿಂದಿನಂತೆಯೇ ಇಂದಿಗೂ ಉಳಿದವು. ಸ್ವಲ್ಪ ಕಾಲದ ಹಿಂದೆ ಈ ಹವ್ಯಾಸೀ ರಂಗಭೂಮಿಗೆ ಟಿಕೇಟು ದರದ ಮೂಲಕ ನಾಲ್ಕಾಣೆ ಸಂಪಾದಿಸುವುದೇ ಕಷ್ಟವಾಗಿತ್ತು. ಈಗ ಸ್ವಲ್ಪ ಹೆಚ್ಚು ಸಂಪಾದಿಸುವಂತಿದ್ದಾರೆ. ಇವರುಗಳಿಗೆ ಟಿಕೇಟು ಹಣವೇ ಆದಾಯ ಮತ್ತು ಬಂಡವಾಳ. ಹಾಗಾಗಿ ಈ ಹವ್ಯಾಸೀ ರಂಗಾಸಕ್ತರುಗಳು ವಿಮರ್ಶಾತ್ಮಕ ಪ್ರೇಕ್ಷಕ ವರ್ಗವನ್ನು ಇಂದೇನಾದರೂ ಸೃಷ್ಟಿಸಿದ ಪಕ್ಷದಲ್ಲಿ ಹೆಚ್ಚು ಬೆಳವಣಿಗೆಯನ್ನು ಕಾಣಬಹುದು. ದುಡ್ಡುಕೊಟ್ಟು ನಾಟಕ ನೋಡುವವರನ್ನು ತಯಾರು ಮಾಡ ಬೇಕಾಗಿದೆ.

ಈ ಇಪ್ಪತ್ತೈದು ವರ್ಷಗಳಲ್ಲಿ ಅತ್ಯಂತ ಪ್ರಮುಖ ಮತ್ತು ಸಂತೋಷಕಾರೀ ಬೆಳವಣಿಗೆ ಎಂದರೆ ಮಕ್ಕಳ ರಂಗಮಂದಿರ ತನ್ನನ್ನು ಬೇರೆಯಾಗಿ ಗುರ್ತಿಸಿ ಕೊಂಡು ಅಸ್ತಿತ್ವವನ್ನು ಪಡೆದುಕೊಂಡದ್ದು, ಸರ್ಕಾರಿ ಏಜನ್ಸಿಗಳಾದ ಬಾಲಭವನ ಮುಂತಾದವುಗಳು, ಮತ್ತಿತರ ಕೆಲವು ಖಾಸಗಿ ಸಂಸ್ಥೆಗಳು ಈ ದಿಶೆಯತ್ತ ಅತ್ಯದ್ಭುತ ಕೆಲಸಮಾಡುತ್ತಿರುವುದು ಸ್ತುತ್ಯಾರ್ಹ. ಇಷ್ಟೆಲ್ಲಾ ಈಗ ನಡೆದಿರುವುದು ಒಂದು ಭರವಸೆಯ ಪ್ರಾರಂಭ ಅಷ್ಟೇ. ಆಗಬೇಕಾದದ್ದು ಬಹಳಷ್ಟಿದೆ.

ಸಂಗ್ರಹಾನುವಾದ : **ವೀಜೀಪಾಲ್.**

(ಕಳೆದ ಸಂಚಿಕೆಯಿಂದ) ತೆಲುಗು ಮೂಲ : **ಪುರಾಣಂ ಸುಬ್ರಹ್ಮಣ್ಯ ಶರ್ಮ.**

ಅನು : **ನಗರಗೆರೆ ರಮೇಶ್.**

**ಅಂದಿನ ಗ್ರಾಮೀಣ ಸಾಮಾಜಿಕ ವ್ಯವಸ್ಥೆ :** ಪ್ರತಿಯೊಂದು ಹಳ್ಳಿಯೂ ಸ್ವಯಂಪೋಷಕವಾಗಿದ್ದು ಆಯಾಊರಿನ ಉತ್ಪತ್ತಿಯು ಅಲ್ಲಿನ ಜನರೆಲ್ಲರದಾಗಿತ್ತು. ಎಲ್ಲರೂ ತಮಗೆ ಬೇಕಾದದ್ದೆಲ್ಲವನ್ನೂ ಉತ್ಪಾದಿಸಿ ಸಮಾನವಾಗಿ ಹಂಚಿಕೊಳ್ಳುವ ವ್ಯವಸ್ಥೆಯಿತ್ತು. ಬೆಳೆಯ ಸ್ವಲ್ಪಭಾಗ ತೆರಿಗೆಯ ರೂಪದಲ್ಲಿ ರಾಜನಿಗೆ ಕೊಡಬೇಕಾಗಿತ್ತು. ಆಗಿನದು ಸಾಮೂಹಿಕ ಸಹಕಾರ ಜೀವನ. ಹಳ್ಳಿಯಲ್ಲಿನ ಭೂಮಿ ಅಲ್ಲಿನ ಸಮಸ್ತರಿಗೂ ಸೇರಿತ್ತು. ಖಾಸಗಿ ಆಸ್ತಿ ಎನ್ನುವ ಮಾತೇ ಇರಲಿಲ್ಲ.

ಹಳ್ಳಿಯ ಸಮಸ್ತರಿಗೂ ಆ ಪ್ರದೇಶದ ಭೂಮಿಯ ಮೇಲೆ ಸಮಾನವಾದ ಹಕ್ಕಿರುವ ಪದ್ಧತಿ ಅರಣ್ಯವಾಸೀ ಜನರಿಂದ ಗ್ರಾಮಜೀವನಕ್ಕೂ ಹರಡಿತ್ತೆಂಬುದು ಗಮನಾರ್ಹವಾದ ಅಂಶ. ಈ ಪದ್ಧತಿ ಬ್ರಿಟಿಷರು ನಮ್ಮ ದೇಶವನ್ನು ಆಳಲು ಪ್ರಾರಂಭಿಸಿದ ಕಾಲದಲ್ಲೂ ಇತ್ತು. ಇನ್ನೊಂದು ವಿಶೇಷವೆಂದರೆ ಪ್ರಪಂಚದಲ್ಲಿ ಅರಣ್ಯವಾಸೀ ಜೀವನದಿಂದ ಬೆಳೆದ ನಾಗರಿಕ ಸಮಾಜಗಳು ಇರುವ ಕಡೆಯೆಲ್ಲಾ ಈ ವ್ಯವಸ್ಥೆಯೇ ಇದೆ. ನಮ್ಮ ದೇಶದಲ್ಲಿ ಕೆಲವು ಗ್ರಾಮಗಳಲ್ಲಿ ರೈತ್ವಾರೀ ವ್ಯವಸ್ಥೆಯೂ ಇತ್ತು. ಈ ವ್ಯವಸ್ಥೆಯಿದ್ದ ಗ್ರಾಮಗಳಲ್ಲಿ ಭೂಮಿಯನ್ನು ಕುಟುಂಬಗಳ ಆಧಾರವಾಗಿ ವಿಭಾಗಿಸುತ್ತಿದ್ದರು. ಗ್ರಾಮಗಳು ದೊಡ್ಡವಾದಾಗಲೆಲ್ಲಾ ಈ ಭೂಮಿಯನ್ನು ಹೊಸದಾಗಿ ಅಳೆದು ಪುನರ್ವಿಂಗಡನೆ ಮಾಡುತ್ತಿದ್ದರು. ಈ ವಿಭಜನೆಯೂ ಮತ್ತೆ ಸಮಾನತೆಯ ಆಧಾರದ ಮೇಲೆಯೇ ಇರುತ್ತಿತ್ತು.

ಶಕ್ತಿಶಾಲಿಗಳು ಶಕ್ತಿಹೀನರ ಮೇಲೆ ಅಧಿಕಾರವನ್ನು ಗಳಿಸಿದಾಗ, ಗ್ರಾಮಗಳನ್ನು ಆಕ್ರಮಿಸಿದಾಗ, ಹೊಲಗಳಲ್ಲಿ ಕೆಲಸ ಮಾಡುವವರು, ಆ ಕೃಷಿಯ ಫಲವನ್ನು ಅನುಭವಿಸುವವರು ಬೇರೆಯಾದರು. ಆಗ ಭೂಮಿ ಸ್ವಲ್ಪ ಜನರ ಖಾಸಗೀ ಆಸ್ತಿಯಾಗಿ ಜಮೀನ್ದಾರರ ಒಂದು ಹೊಸವರ್ಗ ಸೃಷ್ಟಿಯಾಯಿತು. ಅವರ ಹೊಲಗಳಲ್ಲಿ ಕೆಳಜಾತಿಯ ಜನರು ದುಡಿಯಬೇಕಾಗಿ ಬಂತು. ಅದಕ್ಕೆ ಮೊದಲು ಭೂಮಿಯ ಮೇಲೆ ವ್ಯಕ್ತಿಗಳಿಗೆ ಖಾಸಗೀ ಹಕ್ಕು ಇದ್ದಿತೆಂಬುದಕ್ಕೆ ಐತಿಹಾಸಿಕ ಆಧಾರಗಳಿಲ್ಲ. ಆದರೆ ರಾಜನಿಗೆ ಆದಾಯದಲ್ಲಿ ಆರನೆಯಭಾಗ ತೆರಿಗೆಯ ರೂಪದಲ್ಲಿ ಕೊಡಬೇಕಾಗಿತ್ತು. ಭೂಮಿಯ ಮೇಲಿನ ಹಕ್ಕು ಯಾರದೆಂಬುದರ ಬಗ್ಗೆ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗಿವೆ.

ಭೂಮಿ ರಾಜನದ್ದೂ ಅಲ್ಲ. ಯಾವ ಒಬ್ಬ ವ್ಯಕ್ತಿಯದೂ ಅಲ್ಲ ತೆರಿಗೆಯನ್ನು ಸ್ವೀಕರಿಸುವ ಅಧಿಕಾರ ಮಾತ್ರ ರಾಜನಿಗಿದೆ. ಆದರೆ ಒಂದು ಊರಿನ ಭೂಮಿಯ ಮೇಲೆ, ಆ ಊರಿನಲ್ಲಿ ವಾಸಮಾಡುವ ಜನರೆಲ್ಲರದೂ ಸಾಮೂಹಿಕವಾಗಿ, ಅಧಿಕಾರ

ಇರುತ್ತದೆ. ಹೀಗಿದ್ದಾಗ ಆಗಿನ ಕಾಲದಲ್ಲಿ, ಭೂಮಿಯನ್ನು ಮಾರಾಟ ಮಾಡುವುದಾಗಲೀ, ಕೊಳ್ಳುವುದಾಗಲೀ ಇದ್ದೀತೇ ? ಭೂಮಿ ವೈಯಕ್ತಿಕವಾಗಿ, ಯಾರದ್ದೂ ಅಲ್ಲದಿದ್ದಾಗ, ಮಾರುವವರು, ಕೊಳ್ಳುವವರು ಯಾರಾದಾರು ? ಅಂಥ ಭೂಮಿಯ ಬೆಲೆಯನ್ನು ಯಾರಿಗೆ ಸಂದಾಯ ಮಾಡಬೇಕು ? ಈ ಪ್ರಶ್ನೆಗಳಿಗೆ, ಕೊಸಾಂಬಿ ಉತ್ತರ ಕೊಡಲು ಪ್ರಯತ್ನಿಸಿದ್ದಾರೆ. ಬ್ರಾಹ್ಮಣರಿಗೆ ದಾನದ ರೂಪದಲ್ಲಿ ಭೂಮಿಯನ್ನು ಕೊಡುತ್ತಿದ್ದರು. ಅಂಥ ಭೂಮಿಯಮೇಲೆ ತೆರಿಗೆ ಕೊಡಬೇಕಾಗಿರಲಿಲ್ಲ. ಅಂದರೆ ಭೂಮಿಗೆ ಇಂತಿಷ್ಟು ಬೆಲೆ ನಿಗದಿಯಾಗಿರುತ್ತಿರಲಿಲ್ಲ. ಆದಕ್ಕೆ ತೆರಿಗೆವಿನಾಯ್ತಿ ನೀಡಿದ ಕಾರಣ ಖಜಾನೆಯ ಲೆಕ್ಕದಲ್ಲಿ ಬರೆಯಬೇಕಾದಾಗ, ಆ ಭೂಮಿಯಿಂದ ಬರಬೇಕಾದ ತೆರಿಗೆ ಹಣವನ್ನು ಬಿಟ್ಟು ಬರೆದುಕೊಳ್ಳುತ್ತಿದ್ದರು. ಒಬ್ಬ ರಾಜನು ಭೂದಾನ ಮಾಡಿದಾಗ, ಅದರ ಒಡೆಯನಾಗಿ ದಾನಮಾಡುತ್ತಿರಲಿಲ್ಲ. ಅದರಿಂದ ತನಗೆ ಬರಬೇಕಾದ ತೆರಿಗೆಯನ್ನು ಮಾತ್ರ ಮಾಫೀಮಾಡುತ್ತಿದ್ದ. ಔರಂಗಜೇಬನ ಕಾಲದಲ್ಲಿ ಭಾರತವನ್ನು ಸಂದರ್ಶಿಸಿದ ವಿದೇಶೀಯರು :- ಇಲ್ಲಿ ಜಮೀನ್ದಾರರಾಗಲೀ, ಆಸ್ತಿಯ ಮೇಲೆ, ವೈಯಕ್ತಿಕ ಒಡೆತನ ಹೊಂದಿದವರಾಗಲೀ ಇರಲಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಸಹಕಾರ, ಸಮಷ್ಟಿಜೀವನ, ಸಾಮೂಹಿಕ ಕೃಷಿ, ಭೂಮಿಯಮೇಲಿನ ಸಾಮಾಜಿಕ ಒಡೆತನ, ಇವು ಅರಣ್ಯವಾಸಿ ಸಮಾಜದಿಂದ ನಾಗರಿಕ ಸಮಾಜಕ್ಕೆ ಸಂಕ್ರಮಿಸಿದ ಲಕ್ಷಣಗಳು. ತೀರಾ ಇತ್ತೀಚಿನವರೆಗೂ ನಮ್ಮ ಹಳ್ಳಿಗಳು ಸ್ವಯಂ ಪೋಷಿತವಾಗಿರುವುದಕ್ಕೆ ಮುಖ್ಯ ಕಾರಣಗಳು ಈ ಲಕ್ಷಣಗಳೇ. ಪ್ರಾಚೀನ ಭಾರತೀಯ ಗ್ರಾಮೀಣ ವ್ಯವಸ್ಥೆ ಅಪ್ಪಟ ಪ್ರಜಾತಂತ್ರ. ಸಮಾಜ ಈ ವ್ಯವಸ್ಥೆಯ ಭಾರತೀಯರು ಖಾಸಗೀ ಆಸ್ತಿಗಾಗಿ ಒದ್ದಾಡಿರಲಿಲ್ಲ. ವ್ಯಕ್ತಿ ತನಗಿಂತ ಸಮಾಜವೇ ಮುಖ್ಯವೆಂದು ಗುರ್ತಿಸಿ ಸಾಮಾಜಿಕ ಶಕ್ತಿಯನ್ನೇ ಆರಾಧಿಸಿದನು.

ಈ ಭೂಮಿ ಯಾರದು ? ಎಂಬ ಪ್ರಶ್ನೆ ಬಂದಾಗ ಜನರೆಲ್ಲರದೂ ಎಂದ ಆಗಿನ ಭಾರತೀಯ ಗ್ರಾಮೀಣ ನಾಗರಿಕತೆಯ ಮುಂದೆ ಭೂಮಿಯನ್ನು ಖಾಸಗೀ ಆಸ್ತಿಯಾಗಿ ಪರಿಗಣಿಸುವ ಆಧುನಿಕ ನಾಗರಿಕತೆ ನಾಚಿಕೆಯಿಂದ ತಲೆ ತಗ್ಗಿಸಲೇಬೇಕು.

## ಜಾತಿ ವ್ಯವಸ್ಥೆ

ಈ ದೇಶದ ಜಾತಿ ವ್ಯವಸ್ಥೆಯ ಉಗಮದ ಬಗ್ಗೆ ಎಷ್ಟು ಜನ ವಿದ್ವಾಂಸರು ವ್ಯಾಖ್ಯಾನ ಮಾಡಿರುವರೋ ಅಷ್ಟೂ ತರಹದ ಸಿದ್ಧಾಂತಗಳೂ ಇವೆ. ಇಲ್ಲಿ ನಾವು

ಅವುಗಳ ಮೌಲ್ಯಮಾಪನದಲ್ಲಾಗಲೀ ಅಥವಾ ಮೇಲಿನ ಜಾತಿಯ ಜನರ ಅಹಂಕಾರವನ್ನು ಚರ್ಚಿಸುವುದರಲ್ಲಾಗಲೀ ತೊಡಗುವುದಿಲ್ಲ. ಈ ಜಾತಿ ವ್ಯವಸ್ಥೆಗೂ ನಮ್ಮ ದೇಶದ ಜನರ ಅರಣ್ಯವಾಸಿ ಜೀವನಕ್ಕೂ ಏನಾದರೂ ಸಂಬಂಧವಿದೆಯೋ ಎಂಬ ಪ್ರಶ್ನೆ ಮಾತ್ರ ನಮಗಿಲ್ಲಿ ಪ್ರಸ್ತುತ.

ನಾಗರಿಕ ಸಮಾಜ ಎಷ್ಟೇ ಪ್ರಯತ್ನಪಟ್ಟರೂ ಅರಣ್ಯವಾಸೀ ಸಮಾಜವನ್ನು ಪೂರ್ತಿಯಾಗಿ ನಾಶಗೊಳಿಸುವುದು ಸಾಧ್ಯವಾಗಲಿಲ್ಲ. ಗಣಗಳು ಮತ್ತು ಸಂಘಗಳು, ಗ್ರಾಮೀಣ ವ್ಯವಸ್ಥೆಯ ಜತೆ ಒಂದಾಗಲಿಲ್ಲ. ಧರ್ಮಶಾಸ್ತ್ರಗಳು ಹೇಳುವ ಜಾತಿವ್ಯವಸ್ಥೆಯ ಉಗಮವನ್ನು ಈಗ ಯಾರೂ ಒಪ್ಪುವುದಿಲ್ಲ. ಚತುರ್ವರ್ಣಗಳ ಬಗ್ಗೆ ಬ್ರಾಹ್ಮಣರು ಬರೆದ ವಿಷಯಗಳು ಸತ್ಯಕ್ಕೆ ದೂರವೆಂಬುದು ನಿಶ್ಚಿತವಾಗಿದೆ. ಒಂದು ಹೊಸ ವೃತ್ತಿಗಾಗಿ ಹೊಸ ಜನಾಂಗ ಹುಟ್ಟಿಕೊಂಡಾಗಲೆಲ್ಲ, ಒಂದು ಹೊಸ ಜಾತಿಯೇ ಹುಟ್ಟಿಕೊಂಡಿತು. ಇಂಥ ಹೊಸ, ಮಿಶ್ರ ಮತ್ತು ಉಪಜಾತಿಗಳ ಬಗೆಗೆ ಧರ್ಮಶಾಸ್ತ್ರಗಳಲ್ಲಿ ಯಾವ ಮಾಹಿತಿಯೂ ಸಿಗುವುದಿಲ್ಲ.

ಅನಾರ್ಯರಾದ ಅರಣ್ಯವಾಸೀ ಜನರ ಬಗ್ಗೆ ಧರ್ಮಶಾಸ್ತ್ರಗಳನ್ನು ಬರೆದವರಿಗೆ ಆಸಕ್ತಿ ಇರಲಿಲ್ಲ. ಕಾವ್ಯಗಳಲ್ಲಿಯೂ ಅವರು ಕಾಣುವುದಿಲ್ಲ. ನಮ್ಮ ದೇಶದ ಇತಿಹಾಸದಲ್ಲಿ ಮತ್ತು ಧರ್ಮಶಾಸ್ತ್ರಗಳಲ್ಲಿ, ಜಾತಿ (Caste), ಮತ್ತು ಪಂಗಡ (Tribe) ಎಂಬ ಪದಗಳನ್ನು, ಸಮಾನಾರ್ಥಕವಾಗಿಯೇ ಬಳಸಲಾಗಿದೆ. ಇದಕ್ಕೆ ಕಾರಣ ಜಾತಿ ಪಂಗಡಗಳ ನಡುವಿನ ವಿರೋಧಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದು. ಉದಾಹರಣೆಗೆ— ಮನು ಲಿಚ್ಛವಿಗಳನ್ನು ನೀಚ ಜಾತಿಗಳವರೆಂದು ಕರೆದಿದ್ದಾನೆ. ಅವರೂ ಒಂದು ಪಂಗಡ. ಮತ್ತೊಂದು ಉದಾಹರಣೆ: ಮನುವಿನ ಪ್ರಕಾರ 'ಅಂಬಷ್ಠ' ಎನ್ನುವುದು ಬ್ರಾಹ್ಮಣ ತಂದೆ ಮತ್ತು ವೈಶ್ಯತಾಯಿಗೆ ಹುಟ್ಟಿದ ನೀಚಜಾತಿಯನ್ನು ಸೂಚಿಸುವ ಪದ. ಆದರೆ ಮಹಾಭಾರತದಲ್ಲಿ ಅದನ್ನು ಒಂದು ಪಂಗಡವೆಂದು ಕರೆಯಲಾಗಿದೆ. ಹೀಗೆ ಹಲವು ಉದಾಹರಣೆಗಳು ಜಾತಿ ಮತ್ತು ಪಂಗಡಗಳ ವಿಂಗಡಣೆಯಲ್ಲಿ ಉಂಟಾದಂಥ ಗೊಂದಲವನ್ನು ಸ್ಪಷ್ಟಗೊಳಿಸುತ್ತವೆ.

ಅರಣ್ಯವಾಸಿ ಸಮಾಜದ ಹಲವು ಲಕ್ಷಣಗಳು ಜಾತಿವ್ಯವಸ್ಥೆ ಅಸ್ತಿತ್ವಕ್ಕೆ ಬಂದ ಮೇಲೂ ಅದರಲ್ಲಿ ನುಸುಳಿದವು. ಒಂದು ಪಂಗಡ ಅಥವಾ ಒಂದು ಜಾತಿಯ ಜನ ಅದೇ ಪಂಗಡ ಅಥವಾ ಜಾತಿಯಲ್ಲಿಯೇ ಮದುವೆಯಾಗಬೇಕು.

ಆದರೆ ಸಪಿಂಡ ವಿವಾಹ ಸಲ್ಲದು. ಇಂಥ ಲಕ್ಷಣಗಳನ್ನು ಸಮಾಜದ ಎಲ್ಲ ವರ್ಗಗಳ ಜನರಲ್ಲೂ ಕಾಣಬಹುದು. ಸಮಾಜವು ನಾಗರಿಕವಾದರೂ ಸಹ ಈ ಲಕ್ಷಣಗಳು ಮಾಯವಾಗಿಲ್ಲ. ಹೆಚ್ಚು ನಾಗರಿಕವಾಗಿದೆಯೆಂದು ಭಾವಿಸುವ ಮೇಲು ಜಾತಿಯ ಜನರಲ್ಲೂ ಈ ಲಕ್ಷಣಗಳು ಕಾಣುತ್ತಿವೆ. (ಪ್ರಾಚೀನ ಸಮಾಜವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿಗೂ ಆ ಜಾತಿಯ ಹಿರಿಯರು ಸದಸ್ಯರಾದ ಸಭೆಯೊಂದಿರು ತ್ತಿತ್ತು. ಈ ಸಭೆ ಒಂದು ರೀತಿಯಲ್ಲಿ ಸರ್ವಾಧಿಕಾರಿ. ಒಂದು ಪಂಗಡ ಅಥವಾ ಜಾತಿಯ ಕಟ್ಟುಪಾಡುಗಳಿಗೆ ವಿರುದ್ಧವಾಗಿ ನಡೆದುಕೊಂಡವನಿಗೆ ಅತಿ ಕಠಿಣವಾದ ಶಿಕ್ಷೆಯೆಂದರೆ ಸಮಾಜ ಬಹಿಷ್ಕಾರ. ಈ ಪದ್ಧತಿ ಈಗಲೂ ಅಲ್ಲಲ್ಲಿ ಕಂಡಬರುತ್ತದೆ. ವ್ಯಕ್ತಿ ಸಮಾಜದ ರಕ್ಷಣೆಯಿಲ್ಲದೆ ಬದುಕಲಾರನೆಂಬುದು ಈ ಶಿಕ್ಷೆ ವಿಧಿಸುವುದರ ಹಿಂದಿರುವ ಮನೋಭಾವ.)

ಪ್ರಾಚೀನ ಸಮಾಜದ ಮುಖ್ಯ ಲಕ್ಷಣಗಳಲ್ಲಿ ಇನ್ನೂ ಅಸ್ತಿತ್ವದಲ್ಲಿರುವ ಒಂದು ಮುಖ್ಯ ಅಂಶವೆಂದರೆ ಗೋತ್ರಗಳ ವಿಭಜನೆ. ಮುಖ್ಯವಾಗಿ ಈ ಗೋತ್ರಗಳನ್ನು ಅಗ್ರಜಾತಿಯಲ್ಲಿ ಕಾಣುತ್ತೇವೆ. ಸಗೋತ್ರ ವಿವಾಹಗಳು ಈಗಲೂ ನಿಷಿದ್ಧ. ಒಂದೇ ಗೋತ್ರದ ಗಂಡು ಹೆಣ್ಣುಗಳನ್ನು ಅಣ್ಣ ತಂಗಿಯರ ಸಂಬಂಧವೆಂದೇ ತಿಳಿಯಲಾಗು ತ್ತದೆ. ಈ ಗೋತ್ರಗಳ ಹೆಸರುಗಳು ಸಾಮಾನ್ಯವಾಗಿ ಒಂದು ಗಿಡ, ಪಕ್ಷಿ ಅಥವಾ ಪ್ರಾಣಿಯದಾಗಿರುತ್ತವೆ. ಉದಾಹರಣೆಗೆ – ಕಾಶ್ಯಪಗೋತ್ರ. ಕಶ್ಯಪ ಅಂದರೆ ಆಮೆ. ಭಾರದ್ವಾಜ ಎನ್ನುವುದು ಒಂದು ಪಕ್ಷಿಯ ಹೆಸರು. ಹೀಗೆ ಹಿಂದೆ ಒಂದೊಂದು ಪಂಗಡವನ್ನೂ ಗುರುತಿಸಲು ಉಪಯೋಗಿಸುತ್ತಿದ್ದ ಹೆಸರು ಗಳು ಈಗ ಗೋತ್ರಗಳ ಹೆಸರುಗಳಾಗಿವೆ. ಮಹರ್ಷಿಗಳು ಗೋತ್ರಕಾರರೆಂದು ಹೇಳಲಾಗುತ್ತಿದೆಯಾದರೂ ಈ ಗೋತ್ರಗಳ ಮೂಲ ಅರಣ್ಯವಾಸೀ ಸಮಾಜದ ಗಣಸಂಕೇತ (totemism) ದಲ್ಲಿದೆ. ಈ ಗೋತ್ರಗಳ ಸಂಖ್ಯೆಯ ಬಗ್ಗೆ ಯೂ ನಮ್ಮ ಪ್ರಾಚೀನ ಲೇಖಕರಲ್ಲಿ ಒಮ್ಮತವಿಲ್ಲ. ಈ ಸಂಖ್ಯೆ ಬೇರೆಬೇರೆ ಗ್ರಂಥ ಗಳಲ್ಲಿ 24 ರಿಂದ 73ರವರೆಗೆ ಹರಡಿಕೊಂಡಿದೆ. ಆದರೆ ಗೋತ್ರಕಾರರೆಂದು ಹೇಳಲಾಗುತ್ತಿರುವವರು ಸಪ್ತಋಷಿಗಳು. ಕೆಲವು ಗೋತ್ರಗಳನ್ನು ಒಟ್ಟುಗೂಡಿಸಿ ಪ್ರವರಗಳೆಂದೂ ಕರೆದಿದ್ದಾರೆ. ವೈದಿಕ ಧರ್ಮದಲ್ಲಿ ಹೊಸದಾಗಿ ಸೇರಿದ ಪಂಗಡ ಗಳ ಜನರಿಗೋಸ್ಕರ ಹೊಸ ಗೋತ್ರಗಳನ್ನು ಸೃಷ್ಟಿಸಿರಬಹುದೆಂದು ಕೊಸಾಂಬಿ ಯವರು ಹೇಳುತ್ತಾರೆ. ಆಶ್ವಲಾಯನ ಶ್ರೌತಸೂತ್ರಗಳಲ್ಲಿ ನಮೂದಿಸಿರುವ ಗೋತ್ರಗಳಲ್ಲಿ ಕಂಡುಬರುವ — ನಲವತ್ತೊಂಬತ್ತು --- ವಿಚಿತ್ರವಾದ ಹೆಸರುಗಳು ಮೇಲಿನ ಎಲ್ಲ ಮಾತುಗಳನ್ನೂ ಸಮರ್ಥಿಸುತ್ತವೆ. ಆಶ್ವಲಾಯನ ಶ್ರೌತ ಸೂತ್ರ ಗಳಲ್ಲಿ ಕೊಟ್ಟಿರುವ ಸೂತ್ರಗಳ ಪಟ್ಟಿ ಹೀಗಿದೆ :– ವತ್ಸ (ಕರು), ಶುನಕ (ನಾಯಿ),

ರಿಕ್ಸ (ಕರಡಿ), ಭಾರದ್ವಾಜ (ಒಂದು ಬಗೆಯ ಪಕ್ಷಿ), ಮುಗ್ಗಲ (ಒಂದು ಬಗೆಯ ಮೀನು), ಕಪಿ (ಕೋತಿ), ಅಜ (ಆಡು), ರೇಣು (ಹೂವಿನ ಅಂಡಾಣು), ವೇಣು (ಬಿದುರು), ಕಶ್ಯಪ (ಆಮೆ), ಶಾಂಡಿಲ್ಯ (ಒಂದು ಬಗೆಯ ಹಕ್ಕಿ), ಗೌತಮ (ಹಸು). ಇಷ್ಟೇ ಅಲ್ಲದೆ ಬೇರೆ ವೈದಿಕ ಗ್ರಂಥಗಳಲ್ಲಿ ಕೌಶಿಕ (ಗೂಬೆ) ಮಂಡೂಕ (ಕಪ್ಪೆ), ದರ್ಭೆ (ಹುಲ್ಲು), ತಿತ್ತಿರ (ಗಿಣಿ) ಮೊದಲಾದ ಹೆಸರುಗಳು ಕಾಣಬರುತ್ತವೆ. ಇವೆಲ್ಲವೂ ಪ್ರಾಚೀನ ಅರಣ್ಯವಾಸೀ ಜನರ ಗಣಸಂಕೇತಗಳು. ಹಲವು ಗೋತ್ರಗಳ ಮೂಲ ಪುರುಷರು ಋಷಿಗಳೆಂದು ಹೇಳಿದರೂ ಇನ್ನುಳಿದ ಬಹಳಷ್ಟು ಹೆಸರುಗಳನ್ನು ಋಷಿಗಳ ಹೆಸರೆಂದು ಹೇಳಲಾಗದು. ಋಷಿಗಳ ಹೆಸರುಗಳನ್ನೇ ಹೇಳುವಾಗಲೂ, ಅವರೂ ಒಂದಾನೊಂದು ಕಾಲದಲ್ಲಿ ಅನಾಗರಿಕ ಸಮಾಜದಲ್ಲಿ ವಾಸಿಸುತ್ತಿದ್ದವರೇ ಎಂಬುದನ್ನು ಮರೆಯುತ್ತಾರೆ. ಆಸ್ತಿಯ ವಾರಸುತನ, ಶ್ರಾದ್ಧಕರ್ಮ ಮಾಡುವ ಹಕ್ಕು ಮುಂತಾದ ವಿಷಯಗಳಲ್ಲಿ ಗೋತ್ರದ ಪ್ರಾಮುಖ್ಯತೆ ಬಹಳ.

ಗೋತ್ರಗಳು ಬ್ರಾಹ್ಮಣರಲ್ಲಿ ಮಾತ್ರವಲ್ಲ, ಬೇರೆ ಜಾತಿಗಳಲ್ಲೂ ಇವೆ. ಉದಾಹರಣೆಗೆ ಬುದ್ಧನಿಗೆ ಗೌತಮನೆಂಬ ಹೆಸರಿದೆ. ಅವನ ತಂದೆ ಮತ್ತು ಅವನ ಸೋದರ ಸಂಬಂಧಿಯಾದ ಆನಂದರಿಗೂ ಗೌತಮ ಎಂಬ ಹೆಸರು ಉಪಯೋಗಿಸಲ್ಪಟ್ಟಿದೆ. ಕ್ಷತ್ರಿಯರಲ್ಲಿಯೂ ಗೋತ್ರಗಳ ಪದ್ಧತಿಯಿತ್ತೆಂದು ಇದರಿಂದ ವ್ಯಕ್ತವಾಗುತ್ತದೆ. ಜೈನಮತ ಸ್ಥಾಪಕನಾದ ಮಹಾವೀರ ಕಾಶ್ಯಪಗೋತ್ರೋದ್ಭವ. ಆಂಧ್ರ ಪ್ರಾಂತ್ಯದಲ್ಲಿ ರಾಘಂಡಲ ಗೋತ್ರದವರಾದ ಯಾದವರು ರಾಘಂಡಲ (ಅಂಜೂರ) ಎಲೆಗಳನ್ನು ಊಟ ಮಾಡಲು ಬಳಸುವುದಿಲ್ಲ.

ಬ್ರಾಹ್ಮಣರು ಮತ್ತು ಕ್ಷತ್ರಿಯರು ತಾವು ಅಗ್ರಜಾತಿಯವರೆಂದೂ, ಕೆಳಗಿನ ಜಾತಿಯವರು ಹೀನರೆಂದು ಹೇಳಿದರೂ, ಅವರ ಪೂರ್ವಜರೂ ಎಲ್ಲರ ಪೂರ್ವಜರ ರೀತಿಯಲ್ಲೇ ಅರಣ್ಯವಾಸಿಗಳೆನ್ನುವುದು ಶತಸ್ಸಿದ್ಧ. ಈ ಜಾತಿ ವ್ಯವಸ್ಥೆ ಹಲವು ಹಿತಗಳಿಂದಾಗಿ ಹೆಚ್ಚು ಬದಲಾವಣೆಗಳಿಲ್ಲದೇ ಇನ್ನೂ ನಮ್ಮಲ್ಲಿ ನಿಂತಿದೆ. ಆದರೆ ಹಳೆಯ ಪದ್ಧತಿಗಳಲ್ಲಿ ಕೆಲವು ಈ ಜಾತಿ ವ್ಯವಸ್ಥೆಯಲ್ಲಿಯೂ ನುಸುಳಿವೆ. ಉದಾಹರಣೆಗೆ, ಜನರು ಪಂಗಡಗಳಾಗಿ ಜೀವಿಸುತ್ತಿರುವಾಗ ತಪ್ಪು ಮಾಡಿದವರನ್ನು ಆ ಪಂಗಡದಿಂದ ಹೊರಹಾಕುತ್ತಿದ್ದರು. ಜಾತಿವ್ಯವಸ್ಥೆಯಲ್ಲಿಯೂ, ಜಾತಿ ಭ್ರಷ್ಟನನ್ನು ಮಾಡುವ ಪದ್ಧತಿಯಿದೆ. ಇದು ಅರಣ್ಯವಾಸೀ ಜನರ ಸಂಪ್ರದಾಯವೇ.

ಅರಣ್ಯವಾಸೀ ಸಮಾಜದ ಜನರಲ್ಲೂ ವೃತ್ತಿಯಾಧಾರಿತ ವಿಭಜನೆಯಿದ್ದಿತು. ಅದೇ ಪದ್ಧತಿ ವರ್ಣ ವ್ಯವಸ್ಥೆಗೂ ಹಬ್ಬಿ, ವರ್ಣವಿಭಜನೆ ವೃತ್ತಿವಿಭಜನೆಯೂ ಆಯಿತು. ಜಾತಿ ಆಧಾರದ ಮೇಲೆ ಜನರ ವೃತ್ತಿ ಧರ್ಮಗಳು ಹುಟ್ಟಿದವು. ಅರಣ್ಯವಾಸೀ ಸಮಾಜದಲ್ಲಿ ಆರಂಭ ಕಾಲದಲ್ಲಿ ವೃತ್ತಿಗಳು ಸ್ತ್ರೀ ಪುರುಷರ ಮಧ್ಯೆ ಮಾತ್ರ ವಿಭಿನ್ನವಾಗಿತ್ತು. ಮುಂದೆ ವ್ಯಾವಸಾಯಿಕವಾಗಿ ಸಮಾಜ ಅಭಿವೃದ್ಧಿ ಹೊಂದಿದ ಮೇಲೆ ವೃತ್ತಿಗಳು ವಂಶಪಾರಂಪರ್ಯವಾದುವು. ಕೆಲವು ಸಮಯಗಳಲ್ಲಿ ಮಾತ್ರ ಹೊಸಬರನ್ನೂ ತಮ್ಮ ಗುಂಪಿಗೆ ಸೇರಿಸಿಕೊಂಡು ಅವರೂ ತಮ್ಮ ವೃತ್ತಿ ಮಾಡಲು ಅವಕಾಶ ಕೊಡುತ್ತಿದ್ದರು. ಆದರೂ ಮದುವೆಯ ವಿಷಯದಲ್ಲಿದ್ದಂತೆಯೇ ವೃತ್ತಿಗಳ ವಿಷಯದಲ್ಲೂ ಬಹಳ ಕಟ್ಟುಸಿಟ್ಟಾಗಿದ್ದರು. ಈ ಅಂಶವೂ ಸಹ ಪಂಗಡ ವಿಭಜನೆಯಿಂದ ಜಾತಿ ವಿಭಜನೆಯ ಹಂತ ಬಂದಾಗ ಹಾಗೇ ಉಳಿಯಿತು.

**ಆಚಾರಗಳು–ಧರ್ಮ ಸೂತ್ರಗಳು** : ಮನುಸ್ಮೃತಿ ಇತ್ಯಾದಿ ಧರ್ಮಶಾಸ್ತ್ರಗಳು ಆಧಾರವಾಗಿ ನಮ್ಮ ದೇಶದ ಕಾನೂನು ರಚಿತವಾಯಿತು. ಬ್ರಿಟಿಷ್ ಸರಕಾರದವರು ಈ ನ್ಯಾಯಸಂಹಿತೆಯನ್ನು ಬರೆಸುವಾಗ ಈ ಧರ್ಮಶಾಸ್ತ್ರಗಳಿಂದಾಗಿ ಬಹಳಷ್ಟು ತೊಂದರೆಗಳನ್ನನುಭವಿಸಬೇಕಾಯಿತು. ಉದಾಹರಣೆಗೆ ಒಂದೇ ತರದ ತಪ್ಪು ಮಾಡಿದವನಿಗೆ ಅವನ ಜಾತಿಯ ಆಧಾರದ ಮೇಲೆ ಹೆಚ್ಚು ಅಥವಾ ಕಡಿಮೆ ಶಿಕ್ಷೆ ವಿಧಿಸುವ ಪದ್ಧತಿ. ಪಂಡಿತರು ಧರ್ಮಶಾಸ್ತ್ರಗಳಿಗೆ ಕೊಟ್ಟ ವ್ಯಾಖ್ಯಾನಕ್ಕೂ, ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಆಚಾರಗಳಿಗೂ ಹೊಂದಾಣಿಕೆಯಿಲ್ಲದಿರುವುದೂ ಒಂದು ಸಮಸ್ಯೆಯಾಯಿತು.

ನ್ಯಾಯಪೀಠದ ಮುಂದೆ ಎಲ್ಲರೂ ಸಮಾನರೆಂಬ ಸಿದ್ಧಾಂತಕ್ಕೆ ಧರ್ಮಶಾಸ್ತ್ರಗಳು ತೊಡಕಾದವು. ಅದೇ ರೀತಿ ಧರ್ಮಸೂತ್ರಗಳಿಗೆ ವಿರುದ್ಧವಾಗಿದ್ದ ಸಂಪ್ರದಾಯಗಳಿಗೂ ತಮ್ಮ ಹೊಸ ನ್ಯಾಯಸಂಹಿತೆಯಲ್ಲಿ ಸ್ಥಾನ ಕೊಡಬೇಕಾಯಿತು. ಮನುಸ್ಮೃತಿ, ಆಪಸ್ತಂಬ ಸೂತ್ರ, ಗೌತಮ, ಬೌಧಾಯನರ ಪ್ರಕಾರ ಸೋದರಿಕೆಗಳು ನಿಷಿದ್ಧ. ಅವು ಸಗೋತ್ರ ವಿವಾಹವಲ್ಲದಿದ್ದರೂ ಸಪಿಂಡ ವಿವಾಹ. ಆದರೆ ನಮ್ಮ ದೇಶದ ಹಲವೆಡೆ ಈ ಆಚಾರವಿದೆ. ಅದೇ ರೀತಿ ಒಬ್ಬ ಹೆಣ್ಣು, ಒಂದು ಕುಟುಂಬದಲ್ಲಿನ ಸೋದರರೆಲ್ಲರಿಗೂ ಹೆಂಡತಿಯಾಗುವುದು. ಇದರ ಪರಿಣಾಮವೆಂಬಂತೆ ಅಣ್ಣನ ಹೆಂಡತಿ, ತನ್ನ ಗಂಡನ ಮರಣದ ನಂತರ ತನ್ನ ಮೈದುನನನ್ನು ಗಂಡನಾಗಿ ಸ್ವೀಕರಿಸುವುದು. ಈ ರೀತಿ ವಿವಾಹಗಳು ಪಂಗಡ ಜೀವನ ನಡೆಸುವಾಗಿನ ಪದ್ಧತಿ–ಸಮೂಹ ವಿವಾಹ (group marriage) ಈ ರೀತಿಯ ವಿವಾಹಗಳು

ಆಚರಣೆಯಲ್ಲಿರುವುದರಿಂದ ಧರ್ಮಶಾಸ್ತ್ರ ನಿಷಿದ್ಧವಾದರೂ ಮುಂದುವರೆಯುತ್ತಿದೆ, ಸೋದರ ಮಾವನ ಅಥವಾ ಅತ್ತೆಯ ಮಗಳನ್ನು ಮದುವೆಯಾದರೆ ಚಾಂದ್ರಾಯಣ ವೆಂಬ ಪ್ರಾಯಶ್ಚಿತ್ತವನ್ನು ಮನುಸ್ಮೃತಿ ವಿಧಿಸಿದೆ. ಸ್ಮೃತಿಗಳ ಪ್ರಕಾರ ಈ ಸಪಿಂಡ ವಿವಾಹಗಳಿಂದ ಜಾತಿಭ್ರಷ್ಟನಾಗುವುದು. ಆದರೆ ಬೃಹಸ್ಪತಿಯೋ, ಈ ರೀತಿಯ ವಿವಾಹಗಳು ಶಾಸ್ತ್ರಸಮ್ಮತವಲ್ಲದಿದ್ದರೂ ಆಚರಣೆಯಲ್ಲಿರುವುದರಿಂದ ತಪ್ಪಿಸಬಾರದೆಂದು ಹೇಳಿರುವುದುಂಟು. ಬ್ರಿಟಿಷ್ ಸರ್ಕಾರ ನ್ಯಾಯಸಂಹಿತೆಯನ್ನು ತಯಾರು ಮಾಡುವಾಗ ಧರ್ಮಶಾಸ್ತ್ರಗಳಲ್ಲಿ ಮತ್ತು ಆಚರಣೆಯಲ್ಲಿ ಇರುವ ಈ ಎಲ್ಲಾ ವಿಧಗಳ ವಿವಾಹಗಳನ್ನು, ಸಂಪ್ರದಾಯಗಳನ್ನು ಗಮನಕ್ಕೆ ತಂದುಕೊಳ್ಳ ಬೇಕಾಯಿತು. ಇಲ್ಲಿ ಮತ್ತೆ ನೆನೆಸಿಕೊಳ್ಳಬೇಕಾದ ಅಂಶವೆಂದರೆ, ಧರ್ಮಶಾಸ್ತ್ರ ಗಳನ್ನು ಬರೆಯುವುದಕ್ಕೂ ಮೊದಲಿದ್ದ ಹಲವು ಆಚಾರಗಳು ಅರಣ್ಯವಾಸೀ ಜೀವನ ಹಂತದಿಂದ ಬಂದವೆನ್ನುವುದು.

## ಇಂದಿನ ಅರಣ್ಯವಾಸೀ ಜನಾಂಗ — ಅವರ ಅಸಹನೀಯ ಪರಿಸ್ಥಿತಿ :

ಇದುವರೆಗೂ ನಮ್ಮ ಸಮಾಜದ ಬೆಳವಣಿಗೆ ಹೇಗೆ ಅಸಮರ್ಪಕವಾಗಿ ನಡೆದಿದೆಯೆಂಬುದನ್ನು ತಿಳಿದುಕೊಂಡಿದ್ದಾಯಿತು. ಅದೇ ಅಲ್ಲದೆ ಪಂಗಡಗಳಾಗಿ ಜೀವಿಸುವ ಹಂತದ ಆಚಾರಗಳು ಹೇಗೆ ಇನ್ನೂ ನಮ್ಮಲ್ಲಿ ಪ್ರಾಚೀನವಾಗಿಯೇ ಇದೆಯೆಂಬುದೂ ತಿಳಿದುಬಂದಿದೆ. ಆದರೆ ಹಲವು ಅರಣ್ಯವಾಸೀ ಜನರು ಇನ್ನೂ ಬಹಳ ವಿಷಯಗಳಲ್ಲಿ ಹಿಂದೆ ಬಿದ್ದಿದ್ದಾರೆಂಬುದು ನಿರ್ವಿವಾದಾಂಶ. ಅದಕ್ಕೆ ಕಾರಣ ನಮ್ಮ ಸಮಾಜದ ಅಸಮರ್ಪಕ ಬೆಳವಣಿಗೆ. ಪ್ರಸ್ತುತ ಈ ಜನ ಯಾವ ಪರಿಸ್ಥಿತಿಗಳಲ್ಲಿ ಜೀವನ ನಡೆಸುತ್ತಿದ್ದಾರೆಂಬುದು ಈಗ ತಿಳಿಯಬೇಕು.

ಉತ್ಪತ್ತಿ ವಿಧಾನಗಳಲ್ಲಿ ಹಿಂದೆ ಬಿದ್ದಿದ್ದರಿಂದ ಈ ಜನಾಂಗ ದುರ್ಭರ ದಾರಿದ್ರ್ಯದಲ್ಲಿ, ಅಜ್ಞಾನದಲ್ಲಿ, ಕರುಣಾಜನಕ ಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆ. ನಾವು ಎಂದಾದರೂ ಅವರ ಬಗ್ಗೆ ಯೋಚನೆ ಮಾಡಿದರೆ ನಮ್ಮ ನೆನಪಿಗೆ ಬರುವುದು ಅವರ ಹಾಡುಗಳು, ನೃತ್ಯ ಮತ್ತು ರಮ್ಯವೆಂದು ನಾವು ತಿಳಿಯುವ ಜೀವನ. ಆದರೆ ನಿಜಸ್ಥಿತಿಯೆಂದರೆ ಬೆಟ್ಟ ಪ್ರದೇಶದಲ್ಲಿರುವ ಈ ಜನರಿಗಿಂತಲೂ, ಪಟ್ಟಣ ಪ್ರಾಂತ್ಯದಲ್ಲಿನ ಬಡಕಾರ್ಮಿಕರ ಪರಿಸ್ಥಿತಿ ಮೇಲಾಗಿದೆ. ನಾಗರಿಕ ಜೀವನ ಕೆಲಮಟ್ಟಿಗಾದರೂ ಜೀವನಮಟ್ಟವನ್ನು ಹೆಚ್ಚಿಸಿದೆ. ಈ ನಾಗರೀಕತೆಯ ಯಾವ ಸೋಂಕೂ ಇಲ್ಲದ ಅರಣ್ಯವಾಸೀ ಜನರ ದಾರಿದ್ರ್ಯ ಅನುಭವಕ್ಕೆ ವೇದ್ಯ.

ನೆಹರೂ ಇವರ ಬಗೆಗೆ ಬರೆಯುತ್ತಾ, "ಈ ಜನಾಂಗದಿಂದ ನಾಗರಿಕರೆಂದು ಕೊಳ್ಳುವ ನಾವು ಕಲಿಯಬೇಕಾದ್ದು ಬಹಳಷ್ಟಿದೆ. ಅವರನ್ನು ಸರಿಯಾಗಿ ಅರ್ಥಮಾಡಿಕೊಂಡು, ಅವರಿಗೆ ಬೇಕಾದ ಸಹಾಯವನ್ನು ನಾವು ಮಾಡಬೇಕಾಗಿದೆ. ಅವರೆಲ್ಲಾ ತುಂಬಾ ಶಿಸ್ತಿನ ಗುಂಪು ಜನತಂತ್ರವನ್ನು ನಮಗಿಂತಲೂ ನಿಷ್ಠೆಯಿಂದ, ಪಾಲಿಸುವವರು. ಲಿಖಿತ ಸೂತ್ರಗಳಿಲ್ಲದಿದ್ದರೂ ಎಲ್ಲರ ಒಳಿತಿಗಾಗಿರುವ ಸಮಾಜದ ಕಟ್ಟುಪಾಡುಗಳನ್ನು ಚಾಚೂತಪ್ಪದೆ ಪಾಲಿಸುವವರು. ಜೀವನವನ್ನು ಸಂತೋಷಮಯವಾಗಿ ಮಾಡಿಕೊಳ್ಳುವುದೂ ಅವರಿಗೆ ಗೊತ್ತು. ಪೇರುಪೇಟೆ ಗಳಲ್ಲಿ ಒಬ್ಬರಮೇಲೊಬ್ಬರು ಸ್ಪರ್ಧಿಸುವ ನಮಗಿಂತಲೂ ಅವರು ಎಷ್ಟೋ ವಾಸಿ" —ಎಂದು ಹೇಳುತ್ತಾರೆ.

ಬಹಳ ಹಿಂದೆಯೆ ಏಂಗಲ್ಸ್, ನಮ್ಮ ದೇಶದ ಈ ಜನರ ಆಕರ್ಷಣೀಯ ಗುಣಗಳನ್ನು ವಿಶ್ಲೇಷಿಸಿದ್ದಾರೆ. "ಅವರ ವ್ಯವಸ್ಥೆಯಲ್ಲಿ ಪಾಲಕರು, ಪಾಲಿತ ರೆಂಬ ವ್ಯತ್ಯಾಸವಿಲ್ಲ. ಹಕ್ಕಿಗೂ, ಜವಾಬ್ದಾರಿಗೂ ಅಂತರವಿಲ್ಲ. ಸಾಮಾಜಿಕ ಕಾರ್ಯಗಳಲ್ಲಿ—ಹೋರಾಟವೂ ಸೇರಿ—ಪಾಲ್ಗೊಳ್ಳುವುದು ಅವರಿಗೆ ಒಂದು ಸಮಸ್ಯೆಯೇ ಆಗಿರಲಿಲ್ಲ. ಅದು ಉಣ್ಣುವ, ನಿದ್ರೆಮಾಡುವಷ್ಟೇ ಸಹಜವಾಗಿ ಕಂಡಿತು. ಶ್ರಮವಿಭಜನೆ ಗಂಡು ಹೆಣ್ಣುಗಳ ಮಧ್ಯೆ ಇತ್ತೇ ಹೊರತು ಜಾತಿಗಳ ಹೆಸರಿನಲ್ಲಲ್ಲ. ಯಾವುದೇ ಉತ್ಪತ್ತಿಯೂ ಗುಂಪಿನ ಎಲ್ಲರ ಸ್ವತ್ತು ಆಗಿದ್ದು ಅವರ ಮಧ್ಯೆ ಹಂಚಿಕೆಯಾಗುತ್ತಿತ್ತು."

ಈ ರೀತಿಯ ಸಮಸಮಾಜ ಅಸ್ತಿತ್ವದಲ್ಲಿದ್ದುದರಿಂದ ಅವರ ಜೀವನ ಯಾವ ಕಷ್ಟಗಳೂ ಇಲ್ಲದೆ ಅಂದಿನ ಸ್ಥಿತಿಯಲ್ಲಿ ನಡೆಯಲು ಸಾಧ್ಯವಾಯಿತು. ಸ್ವಂತ ಆಸ್ತಿ ಯಿಲ್ಲದಿದ್ದುದರಿಂದ ಪರರ ಶೋಷಣೆಯೆಂಬುದಿರಲಿಲ್ಲ. ಆದರೆ ಅವರ ಆ ಸ್ಥಿತಿ ಯಿಂದಾಗಿ ಮುಂದೆ ನಡೆದ ಬೆಳವಣಿಗೆಗಳು ಅವರಿಗೆ ಎಟುಕಲಿಲ್ಲವಾದ್ದರಿಂದ ಇಂದು ಅವರ ಸ್ಥಿತಿ ಚಿಂತಾಜನಕ.

ಆದಿಕಾಲದ ಸಮಸಮಾಜದಿಂದ ವರ್ಗಸಮಾಜದ ಸೃಷ್ಟಿ, ವೈಜ್ಞಾನಿಕ ಅಭಿವೃದ್ಧಿಯಿಂದಾಗಿ ಪ್ರಾಚೀನ ವ್ಯವಸ್ಥೆಯಲ್ಲೇ ಜೀವನ ನಡೆಸುವವರು ಹಿಂದು ಳಿದಿರುವುದು, ಇವುಗಳ ಬಗ್ಗೆ ಬರೆಯುವ ಸಂದರ್ಭ ಇದಲ್ಲ. ಆದರೆ ಒಂದು ಗಮನಾರ್ಹ ಅಂಶವೆಂದರೆ ಬ್ರಿಟಿಷರ ಕಾಲದಲ್ಲಿ ನಮ್ಮ ಗ್ರಾಮೀಣ ವ್ಯವಸ್ಥೆ ಭಗ್ನವಾಯಿತು. ಜಾತಿ ವ್ಯವಸ್ಥೆಯ ಬೀಜಗಳು ಅರಣ್ಯವಾಸೀ ಹಂತದಲ್ಲಿಯೇ ಇದ್ದವು. ಆದರೆ ಮುಂದೆ ಆ ವ್ಯವಸ್ಥೆ ತನ್ನ ನಿಜವಾದ ಅರ್ಥವನ್ನು ಕಳೆದು ಕೊಂಡು ಶ್ರೇಣೀಕೃತ ಸಮಾಜವನ್ನು ಸೃಷ್ಟಿಸಲು ಮಾತ್ರ ಸಹಾಯವಾಯಿತು.

ದೇಶದ ಅಭಿವೃದ್ಧಿಗೆ ಮುಖ್ಯವಾದ ಅಡ್ಡಗೋಡೆ ನಮ್ಮ ಜಾತಿ ಪದ್ಧತಿ. ಹಿಂದೆ ನೈಸರ್ಗಿಕ ಶಕ್ತಿಗಳನ್ನು ಎದುರಿಸಲು ಉಪಯೋಗಿಸಿದ ಸಮಾಜಶಕ್ತಿ ಇಂದು ಸಮಾಜವನ್ನು ಛಿದ್ರಗೊಳಿಸುವಲ್ಲಿ ಸಕ್ರಿಯವಾಗಿದೆ. ಕೃಷಿಯಿಂದ ಜೀವಿಸುವವರು ಇಂದು ಅರ್ಥವಿಲ್ಲದ ಮೌಢ್ಯಗಳಿಂದ ಗತಕಾಲದ ಗುಲಾಮರಾಗಿದ್ದಾರೆ. ತನ್ನ ಜಾತಿ ವಿಧಿಸಿದ ಕಟ್ಟುಪಾಡುಗಳು ಭಾರತೀಯರಿಗೆ ಮುಖ್ಯವಾಗಿ, ದೇಶದ ಅಭಿವೃದ್ಧಿಯ ಬಗೆಗೆ ಚಿಂತಿಸುವವರೇ ಇಲ್ಲವಾಗಿದ್ದಾರೆ.

**ಅರಣ್ಯವಾಸೀ ಸಮಸಮಾಜದ ಭೌತಿಕ ಮನೋಭಾವ :** ಎಲ್ಲಾ ಸಮಾಜಗಳಲ್ಲಿಯಂತೆ ಅರಣ್ಯವಾಸೀ ಜನರ ಜೀವನಾದರ್ಶಕ್ಕೂ, ಅವರ ಜೀವನದ ರೀತಿಗೂ ತಪ್ಪದೇ ಸಂಬಂಧವಿರಬೇಕು. ಅಂದಿನ ಸಮಸಮಾಜ ಮನೋಭಾವ ಪೂರ್ತಿಯಾಗಿ ಭೌತಿಕವಾದದ್ದು. ಆ ಸಮಾಜದ ಹಲವು ಆದರ್ಶಗಳೂ, ಆಚಾರಗಳೂ ಬೇರೆ ಜನರಲ್ಲೂ ಹರಡಿವೆ. ಅವರ ಭೌತಿಕ ಮನೋಭಾವಕ್ಕೆ ಆಧಾರ ಅವರ ಸಮಷ್ಟಿ ಜೀವನ. ಯಾವ ಕಾಲದಲ್ಲಾದರೂ ಶ್ರಮಜೀವಿಗಳಲ್ಲಿ ನಮಗೆ ಕಂಡು ಬರುವಂತಹುದು ಇದೇ ಮನೋಭಾವ. ಗಣಗಳು, ಸಂಘಗಳು ಮತ್ತು ವ್ರಾತ್ಯಗಳು ಎಂದು ವಿವಿಧ ರೀತಿಯ ಹೆಸರಿನ ಸಮಾಜದ ಆದರ್ಶಗಳನ್ನು ಅರ್ಥಮಾಡಿಕೊಳ್ಳಲು ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಆಧಾರಗಳು ಸಿಗುತ್ತವೆ.

ಪಾಣಿನಿಯ ಸೂತ್ರವೊಂದಿದೆ – ವ್ರಾತೇನ ಜೀವತಿ. ವ್ರಾತಕರ್ಮದಿಂದ ಜೀವಿಸುವವರು – ವ್ರಾತಿನ : ಇವರು ದೇಹಶ್ರಮದಿಂದಲೇ ಜೀವಿಸುವವರು. ಅವರ ಜೀವನ ಅರ್ಥ, ಕಾಮ ಪ್ರಧಾನ. ಭೌತಿಕ ಅವಶ್ಯಕತೆಗಳನ್ನೂ, ಕಾಮವನ್ನೂ ತೃಪ್ತಿಗೊಳಿಸುವುದು ಅವರಿಗೆ ಮುಖ್ಯ. ಅಂದಿಗೆ ಪುರುಷಾರ್ಥಗಳು ಇವೆರಡೆ– ಧರ್ಮಮೋಕ್ಷಗಳೂ ಮುಂದೆ ಸೇರಿದಂತವು. ಆಧ್ಯಾತ್ಮಿಕವಾದ ಈ ಆಶಯಗಳು ಸಮಾಜ ವರ್ಗಗಳಾಗಿ ವಿಂಗಡಣೆ ಹೊಂದಿದ ನಂತರವೇ ಪ್ರವೇಶ ಮಾಡಿವೆ. ಆದಕ್ಕೆ ಮುಂಚಿನ ಸಮಾಜದ ಮನೋಭಾವ ಸಂಪೂರ್ಣವಾಗಿ ಭೌತಿಕ.

ಸಮಾಜದಲ್ಲಿ ಮುಂದೆ ಬುದ್ಧಿಜೀವಿಗಳು ದೇಹಶ್ರಮವನ್ನು ಕಡೆಗಣಿಸಿ ನೋಡಲಾರಂಭಿಸಿದರು. ಗಣಗಳನ್ನು, ಗಣಪತಿಗಳನ್ನು ಅಸಹ್ಯಿಸಿಕೊಂಡರು. ಶ್ರೇಣೀಕೃತ ವರ್ಣವ್ಯವಸ್ಥೆಯಲ್ಲಿ, ಶೂದ್ರರು ದೇಹಶ್ರಮಮಾಡುವವರೆಂಬ ಕಾರಣದಿಂದಾಗಿ ಕೆಳವರ್ಗದವರಾದಂತೆಯೇ ಅದಕ್ಕೂ ಮೊದಲು ಅರ್ಥಕಾಮ ಪ್ರಧಾನವಾದ ಅರಣ್ಯವಾಸೀ ಜನರೂ ಸಹ ಬುದ್ಧಿಜೀವಿಗಳಿಗೆ ಕೀಳಾಗಿ ಕಂಡರು.

ಸಾಮಾಜಿಕ ಅಭಿವೃದ್ಧಿಯೆಲ್ಲವೂ ಬುದ್ಧಿಜೀವಿಗಳ ಕಾರಣದಿಂದಲೇ ನಡೆಯಿತೆನ್ನುವ ನಂಬಿಕೆ ದೇಹಶ್ರಮಕ್ಕಿದ್ದ ಗೌರವವನ್ನು ಹಾಳು ಮಾಡಿತು. ತಾವು ಕೆಲಸ ಮಾಡದೆ, ಶ್ರಮಿಸುವವರನ್ನು ಶೋಷಣೆಮಾಡಿ ಅವರ ಕಷ್ಟದ ಫಲಿತಾಂಶವನ್ನನುಭವಿಸುವವರು ಮಾನ್ಯರಾದರು. ಭಾರತೀಯ ಆಧ್ಯಾತ್ಮಿಕತೆಯ ಉಗಮವಾಗಿದ್ದು ಈ ಸ್ಥಿತಿಯಲ್ಲಿಯೇ. ಅರ್ಥ ಕಾಮ ಪ್ರಧಾನವಾದ ಭೌತಿಕ ಮನೋಭಾವ ಹಿಂದಕ್ಕೆ ಸರಿಯಿತು. ಆದರೆ ಸಾಮೂಹಿಕ ಜೀವನ ನಡೆಸುವ ಅರಣ್ಯವಾಸಿಗಳಲ್ಲಿ ಇಂದಿಗೂ ಇದೇ ಮನೋಭಾವ ಕಂಡು ಬರುತ್ತದೆ. ತಂತ್ರಶಾಸ್ತ್ರ ಅರ್ಥಕಾಮ ಪ್ರಧಾನವಾದ ಭೌತಿಕ ಮನೋಭಾವದಿಂದ ರೂಪುಗೊಂಡದ್ದು. ಮನುಷ್ಯರಲ್ಲಿ ಸ್ತ್ರೀಪುರುಷ ಸಂಯೋಗದಿಂದ ನಡೆಯುವ ಸೃಷ್ಟಿಕಾರ್ಯಕ್ಕೂ, ಪ್ರಕೃತಿಯಲ್ಲಿನ ಸೃಷ್ಟಿಕಾರ್ಯ ಸಾಮ್ಯ ಕಂಡು, ಕೃಷಿಯಲ್ಲಿ ಹೆಚ್ಚು ಫಲ ಪಡೆಯಲು ಸಂಯೋಗವನ್ನು ಹೋಲುವ ತಂತ್ರಗಳನ್ನು ಅನುಷ್ಠಾನಕ್ಕೆ ತಂದರು. ಈಗಲೂ ನಮ್ಮ ಸಮಾಜದಲ್ಲಿನ ಹಲವು ವ್ರತಗಳು, ಪೂಜೆಗಳು ತಂತ್ರಶಾಸ್ತ್ರದಿಂದ ಹುಟ್ಟಿದವು. ಮುಂದಿನ ಬೌದ್ಧ, ಶೈವ, ವೈಷ್ಣವ, ಶಾಕ್ತ ತಂತ್ರಗಳು ಪ್ರಾಚೀನ ಸಮಾಜದ ಭೌತಿಕತೆಯ ಕಾರಣದಿಂದ ಹುಟ್ಟಿದ ಆಚಾರಗಳಿಗೆ ಮಂತ್ರಗಳ ಮೆರಗು ಕೊಟ್ಟವು. ಆದರೆ ಹಲವು ಶಕ್ತಿಗಳ ಕಾರಣಗಳಿಂದ ತಂತ್ರಶಾಸ್ತ್ರ, ಸಾಂಖ್ಯಗಳೂ ಕೂಡ ಆದರ್ಶವಾದೀ ಆಧ್ಯಾತ್ಮಿಕತೆಯ ಒತ್ತಡಕ್ಕೆ ಮಣಿದು ತಮ್ಮ ಭೌತಿಕತೆಯನ್ನು ಕಳೆದುಕೊಂಡು ವೇದಾಂತದ ಭಾಗಗಳಾದವು.

ಈ ಪ್ರಬಂಧ ಪೂರ್ತಿಯಾಗಿ ದೇವೀಪ್ರಸಾದ್ ಚಟ್ಟೋಪಾಧ್ಯಾಯರ 'ಲೋಕಾಯತ'ದ ಮೇಲೆ ಆಧರಿಸಿ ಬರೆದದ್ದು. ಇದು ಪಂಡಿತರಿಗೋಸ್ಕರ ಬರೆದದ್ದು ಅಲ್ಲ. ಸಾಮಾನ್ಯ ಓದುಗನನ್ನು ದೃಷ್ಟಿಯಲ್ಲಿಟ್ಟುಕೊಂಡಿದ್ದರಿಂದ ವಿಷಯದ ಆಳಕ್ಕೆ ಹೋಗದೆ, ಅಂಚಿನಲ್ಲಿ ಮಾತ್ರ ವಿಷಯಗಳನ್ನು ತಡವುತ್ತಾ, ಪರಿಚಯಾತ್ಮಕವಾಗಿ ಮಾತ್ರ ಇರುವ ಲೇಖನವಾಗಿದೆ. ಇಲ್ಲಿ ಉಲ್ಲೇಖವಾಗಿರುವ ವಿಷಯಗಳ ಆಳವಾದ ಅಭ್ಯಾಸಕ್ಕೆ ಓದುಗರು ಇಂಗ್ಲೀಷಿನಲ್ಲಿರುವ 'ಲೋಕಾಯತ'ವನ್ನೇ ಓದುವುದು ಸರಿ.

( ಮುಗಿಯಿತು )

# ಕೊಂಡಜ್ಜಿಯಲ್ಲೊಂದು ಬಯಲಾಟ

**ರಂಗಾರೆಡ್ಡಿ ಕೋಡಿರಾಂಪುರ**

ವರ್ಷವರ್ಷವೂ ರಂಗತರಬೇತಿ ಶಿಬಿರವನ್ನು ನಡೆಸುವುದರ ಮೂಲಕ ರಂಗಭೂಮಿಗೆ ಹೊಸ ಪ್ರತಿಭಾವಂತರನ್ನು ಕೊಡುಗೆಯಾಗಿ ನೀಡುತ್ತಾ ಬಂದಿರುವ ಸಮುದಾಯ ಈ ವರ್ಷ ಇನ್ನೂ ಹೆಚ್ಚಿನ ಮಹತ್ವಾಕಾಂಕ್ಷೆಯುಳ್ಳ ರಂಗತರಬೇತಿ ಶಿಬಿರವನ್ನು ದಾವಣಗೆರೆ ಹತ್ತಿರದ ಕೊಂಡಜ್ಜಿಯಲ್ಲಿ ಡಿಸೆಂಬರ್ 15ರಿಂದ 25ರ ವರೆಗೆ ಹಮ್ಮಿಕೊಂಡಿತ್ತು. ಹೊಸ ಹೊಸ ವಿಚಾರಧಾರೆಗಳನ್ನು, ಸಾಮಾಜಿಕ ಪ್ರಜ್ಞೆಯನ್ನು ಜನರಲ್ಲಿ ಬೆಳೆಸಲು ಪ್ರದರ್ಶಕ ಕಲೆಗಳಂತ ಸುಲಭ ಮಾಧ್ಯಮ ಬೇರೊಂದಿಲ್ಲ. ಆ ದೃಷ್ಟಿಯಿಂದ ಜನಪದ ರಂಗಭೂಮಿಯಲ್ಲಿರುವ ದೊಡ್ಡಾಟ, ಸಣ್ಣಾಟ, ಡಪ್ಪಿನಾಟ, ವೇಷಗಾರರ ಕುಣಿತ, ಬುರ್ರಕಥ, ಕರಪಾಲ ಮೇಳ, ಗೊಂದಲಿಗರ ಮೇಳ, ರಾಧಾನಾಟ, ಶರಣರಾಟ ಮುಂತಾದುವುಗಳನ್ನು ಅರಿಯಲು ಹಾಗೂ ಅವುಗಳನ್ನು ಸದ್ಯದ ಸಾಮಾಜಿಕ ಪರಿಸ್ಥಿತಿಗೆ ಹೊಂದಿಸಲು ಸಾಧ್ಯವೇ ಎಂಬ ಪ್ರಯೋಗವನ್ನು ಈ ಸಲದ ರಂಗತರಬೇತಿ ಶಿಬಿರದಲ್ಲಿ ಮಾಡಲಾಯಿತು. ಸಂಪದ್ಭರಿತವಾದ ಜನಪದ ರಂಗಭೂಮಿಯಲ್ಲಿರುವ ಅನೇಕಾನೇಕ ಪ್ರದರ್ಶಕ ಕಲೆಗಳನ್ನು ಒಟ್ಟಿಗೆ ಅರಿಯಲು ಸಾಧ್ಯವಿಲ್ಲದ್ದರಿಂದ ಬಹಳ ಶ್ರೀಮಂತವಾದ ಹಾಗೂ ಅತಿಕಷ್ಟಕರವಾದ ಬಯಲಾಟ ಪ್ರಕಾರವೊಂದನ್ನು ಮಾತ್ರ ಆರಿಸಿಕೊಂಡು ಅದನ್ನು ಈ ಹತ್ತು ದಿನಗಳ ಶಿಬಿರದಲ್ಲಿ ಖ್ಯಾತ ಜಾನಪದ ತಜ್ಞ ಮುದೇನೂರ ಸಂಗಣ್ಣನವರ ನೇತೃತ್ವದಲ್ಲಿ ಅಭ್ಯಾಸಮಾಡಲಾಯ್ತು.

ಈ ಶಿಬಿರವನ್ನು ಜಾನಪದ ತಜ್ಞರೂ, ಹೊಸಪೇಟೆ ಕಾಲೇಜಿನ ಕನ್ನಡ ಅಧ್ಯಾಪಕರೂ ಆದ ಡಾ. ಬಸವರಾಜ ಮಲಶೆಟ್ಟಿಯವರು ಉದ್ಘಾಟಿಸಿದರು. ಜೊತೆಗೆ ಒಂದೆರಡು ದಿನ ಶಿಬಿರಾರ್ಥಿಗಳ ಜೊತೆಯಲ್ಲೇ ಇದ್ದುಕೊಂಡು ಉತ್ತರ ಕರ್ನಾಟಕ

ದಲ್ಲಿ ಅಂದರೆ ತುಂಗಭದ್ರೆ ನದಿಯಿಂದ ಮೇಲಿರುವ ಜಿಲ್ಲೆಗಳಲ್ಲಿ ಬಳಕೆಯಲ್ಲಿರುವ ಪ್ರದರ್ಶಕ ಕಲೆಗಳ ಸ್ವರೂಪವನ್ನು ಚರ್ಚಾಗೋಷ್ಠಿಯಲ್ಲಿ ವಿವರಿಸಿದರು. ಅವರ ಈ ಉಪನ್ಯಾಸಗಳಲ್ಲಿ ಚರ್ಚಾಸ್ಪದವಾದ ಅನೇಕ ಸಂಗತಿಗಳಿದ್ದರೂ ವಿಷಯಗ್ರಹಿಕೆಯ ದೃಷ್ಟಿಯಿಂದ ಸಾಕಷ್ಟು ಉಪಯುಕ್ತವಾಗಿದ್ದವು. ಬಂದಿದ್ದ ಶಿಬಿರಾರ್ಥಿಗಳಲ್ಲಿ ಅನೇಕರು ವಿದ್ಯಾರ್ಥಿಗಳಿದ್ದು ಇನ್ನೂ ಕೆಲವರು ಜಾನಪದವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡದೇ ಇದ್ದವರಿದ್ದುದರಿಂದ ಯಾವುದು ಜನಪದ, ಯಾವುದು ಜನಪದ ಅಲ್ಲ ಎಂಬ ಗೊಂದಲವೇರ್ಪಡುತ್ತಿತ್ತು. ಒಂದು ದಿನದ ಚರ್ಚೆಯಲ್ಲಿ ಜನಪದ ಅಂದರೇನು ಶಿಷ್ಟ ಅಂದರೇನು ಎಂಬ ವ್ಯತ್ಯಾಸವನ್ನು ಶಿಬಿರಾರ್ಥಿಯೂ ಆಗಿದ್ದ ಶ್ರೀ ರಂಗಾರೆಡ್ಡಿ ಕೋಡಿರಾಂಪುರ ವಿವರಿಸಿದರು. ಜನಪದ ಸಾಹಿತ್ಯ, ಜನಪ್ರಿಯ ಸಾಹಿತ್ಯ, ಶಿಷ್ಟಸಾಹಿತ್ಯ ಎಂಬ ಈ ವರ್ಗೀಕರಣವನ್ನು ಗುರುತಿಸುವ ಕೆಲವು ತೀರ ಸರಳವಾದ ಸೂತ್ರಗಳನ್ನು ತಿಳಿದುಕೊಂಡ ಮೇಲೆ ಮುಂದಿನ ಚರ್ಚೆಗಳಲ್ಲಿ ಈ ಗೊಂದಲವೇರ್ಪಡುವುದು ತಪ್ಪಿತು. ಅನಂತರದ ಒಂದೆರಡು ಗೋಷ್ಠಿಗಳಲ್ಲಿ ಶಿಬಿರಾರ್ಥಿಯಾಗಿದ್ದ ಶ್ರೀ ಎಸ್. ಎ. ಕೃಷ್ಣಯ್ಯ ತೊಗಲು ಬೊಂಬೆಯಾಟ, ಸೂತ್ರದ ಗೊಂಬೆಯಾಟ, ಮುಂತಾದ ಪ್ರಾಚೀನ ಜನಪದ ರಂಗಭೂಮಿಯ ಬಗ್ಗೆ ವಿವರಿಸಿದರು. ಕೃಷ್ಣಯ್ಯನವರ ಒಟ್ಟು ಸಾರಾಂಶ ಆ ಕಲೆಗಳ ಬಗ್ಗೆ ಪರಿಚಯಮಾಡಿಕೊಡುವುದಾಗಿತ್ತೇ ಹೊರತು ಅವುಗಳಿಂದ ಹೊಸ ಸಾಧ್ಯತೆಗಳನ್ನು ವಿಸ್ತರಿಸುವುದರ ಕಡೆ ಗಮನ ಹರಿಸಿದಂತೆ ಕಾಣಲಿಲ್ಲ. ಕೆಲವು ಆಚರಣಾ ಸಂಪ್ರದಾಯಗಳನ್ನೂ ಇವರು ತಿಳಿಸಿ ಅದರ ಕೆಲವು ಫೋಟೋಗಳನ್ನು ಪ್ರದರ್ಶಿಸಿದರು. ದಾವಣಗೆರೆಯ ಎ. ಆರ್. ಜಿ ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ. ಬಿ. ವಿ. ವೀರಭದ್ರಪ್ಪನವರು ಒಂದು ದಿನ ಅತಿಥಿ ಉಪನ್ಯಾಸಕರಾಗಿ ಬಂದು ಸಂಸ್ಕೃತದ ಮಾರ್ಗ ರಂಗಭೂಮಿಯ ಬಗ್ಗೆ ಪರಿಚಯಮಾಡಿಕೊಟ್ಟರು. ಕಾಳಿದಾಸನ ಶಾಕುಂತಲ ನಾಟಕದ ವಿನ್ಯಾಸವನ್ನು ಇಟ್ಟುಕೊಂಡು ಮಾರ್ಗಪರಂಪರೆಯಲ್ಲಿ ಹೇಗೆ ರಂಗಭೂಮಿ ಅರಸರ ಆಸ್ಥಾನಗಳಲ್ಲಿ ಕ್ರಿಯಾಶೀಲವಾಗಿತ್ತು ಎಂಬುದನ್ನು ಭರತನ ನಾಟ್ಯಶಾಸ್ತ್ರದ ಸೂತ್ರಗಳನ್ನಿಟ್ಟುಕೊಂಡು ವಿವರಿಸಿದರು. ಇನ್ನೊಂದು ದಿನ ಅದೇ ದಾವಣಗೆರೆಯ ಡಿ. ಆರ್. ಎಂ. ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ ಎಂ. ಜಿ. ಈಶ್ವರಪ್ಪನವರು ತೀರ ಕೆಳಸ್ತರದಲ್ಲಿರುವ ಕೆಲವು ಜನಪದ ಪ್ರದರ್ಶಕ ಕಲೆಗಳನ್ನು ಪರಿಚಯ ಮಾಡಿಕೊಟ್ಟರು. ಅದರಲ್ಲಿ ಹಾವಾಡಿಗರ ಆಟ, ಕೋಲೆ ಬಸವನಾಟ, ಒಗ್ಗಪ್ಪಗಳು, ವೇಷಗಾರರು ಮುಂತಾದವರಲ್ಲಿರುವ ನಾಟಕೀಯ ಗುಣವನ್ನು ಅಳವಡಿಸಿಕೊಳ್ಳುವುದರ ಬಗ್ಗೆ ಹೆಚ್ಚು ಒತ್ತು ಕೊಟ್ಟು ಮಾತನಾಡಿದರು. ಹತ್ತು ದಿನಗಳ ಕಾಲ ಶಿಬಿರಾರ್ಥಿಗಳ ಜೊತೆಯಲ್ಲೇ ಇದ್ದು ನಿರ್ದೇಶಕ

ಸಂಗಣ್ಣನವರಿಗೆ ಸಹಾಯಕರಾಗಿದ್ದ ನಿಸರ್ಗಪ್ರಿಯರು ಗ್ರಾಮದೇವತೆಗಳ ಬಗ್ಗೆ ಉಪನ್ಯಾಸವಿತ್ತು ಮಾರಮ್ಮನ ಹುಟ್ಟು ಬೆಳವಣಿಗೆಯ ಬಗ್ಗೆ ಹೇಳಿ ಅಸಾದಿಗಳು ಆ ದೇವತೆಯನ್ನು ಬಯ್ಯುವ ಕ್ರಮವನ್ನು ವಿವರಿಸಿದರು. ಶಿಬಿರದ ಮುಕ್ತಾಯದ ದಿನ ಮತ್ತೆ ಬಸವರಾಜ ಮಲಶೆಟ್ಟಿಯವರು ಬಂದು ಸಮಾರೋಪ ಮಾಡಿದರು. ಮುದೇನೂರ ಸಂಗಣ್ಣನವರು ಅಂದು ದೀರ್ಘವಾಗಿ ಮಾತನಾಡಿ ಜನಪದ ರಂಗ ಭೂಮಿಯನ್ನು ದುಡಿಸಿಕೊಳ್ಳುವಾಗ ತುಂಬ ಎಚ್ಚರಿಕೆ ಇರಬೇಕು. ಸ್ವಲ್ಪ ಎಳೆ ತಪ್ಪಿದರೂ ನಮ್ಮ ಉದ್ದೇಶವೂ ವಿಫಲವಾಗುತ್ತದೆ, ಆ ಕಲೆಯೂ ಹಾಳಾಗುತ್ತದೆ. ಇಂಥ ಸಂದರ್ಭದಲ್ಲಿ ತುಂಬ ಸೂಕ್ಷ್ಮವಾಗಿ ಆ ಕಲೆಗಳನ್ನು ಅಭ್ಯಾಸಮಾಡಿ ಎಲ್ಲಿ ಅವು ಪ್ರತಿಗಾಮಿಯಾದ ಆಶಯವನ್ನು ಒಳಗೊಂಡಿವೆಯೋ ಅಂಥ ಕಡೆ ಮಾತ್ರ ನಾವು ಅದನ್ನು ನವೀಕರಿಸುವ ಪ್ರಯತ್ನ ಮಾಡಬೇಕು. ಇಲ್ಲದಿದ್ದರೆ ಯಾವುದು ಇಡೀ ಜನ ಸಮೂಹವನ್ನು ಇಡೀ ರಾತ್ರಿಯೆಲ್ಲ ಹಿಡಿದು ಕೂಡಿಸುತ್ತೋ ಅಂಥ ನಾಟ್ಯ ಕ್ರಿಯೆಯೇ ಇಲ್ಲದಂತಾಗುವ ಅಪಾಯವಿದೆ. ಅದನ್ನು ಸರಿಯಾದ ರೀತಿ ಅರ್ಥ ಮಾಡಿಕೊಳ್ಳಲು ಒಂದು ಶಿಬಿರ ಸಾಕಾಗಲ್ಲ ; ಇಂಥ ಹತ್ತು ಶಿಬಿರಗಳಾದರೂ ಬೇಕಾ ಗುತ್ತದೆ. ಸಮುದಾಯ ಆ ದಿಕ್ಕಿನಲ್ಲಿ ಇನ್ನೂ ಇಂಥ ಅನೇಕ ಶಿಬಿರಗಳನ್ನು ಏರ್ಪ ಡಿಸಲಿ ಎಂದು ಮುಕ್ತಾಯ ಮಾಡಿದರು.

ಶಿಬಿರದಲ್ಲಿ ಮೂಡಲ ಪಾಯದ ಬಯಲಾಟದ ಸಂಗೀತ ಮತ್ತು ಕುಣಿತವನ್ನು ಕಲಿಸಲು ಹಾಮನೂರಿನ ಎಂ. ರೇವಣಸಿದ್ದಪ್ಪ ಎಂಬ ಭಾಗವತರು ಬಂದಿದ್ದರು. ಅವರ ಬಳಿ ಇರುವ ಬಯಲಾಟಗಳೆಲ್ಲ ಇಡೀ ರಾತ್ರಿ ಆಡುವಂಥವಾಗಿದ್ದವು. ಅವು ಗಳನ್ನು ಹತ್ತು ದಿನಗಳಲ್ಲಿ ಕಲಿಯುಲು ಅಸಾಧ್ಯವಾಗಿತ್ತು. ಆಗ ಶಿಬಿರದಲ್ಲೇ ಒಂದು ಆಟವನ್ನು ತಯಾರಿಸಬೇಕೆಂಬ ಉದ್ದೇಶದಿಂದ ಮುದೇನೂರ ಸಂಗಣ್ಣ, ನಿಸರ್ಗ ಪ್ರಿಯ, ಮಲಶೆಟ್ಟಿ ಮತ್ತು ಕೋಡಿರಾಂಪುರ ಅವರಿಗೆ ನಾಟಕದ ಪ್ರತಿ ತಯಾರಿ ಸಲು ನೇಮಿಸಿದರು. ನಿಸರ್ಗ ಪ್ರಿಯರು ಹಾಡುಗಳನ್ನು ಬರೆದಾದ ಮೇಲೆ ಎಲ್ಲರೂ ಕೂತು ಒಂದು ದಿನದಲ್ಲಿ ನಾಟಕದ ಸಂಭಾಷಣೆಗಳನ್ನು ಸಿದ್ಧಪಡಿಸಿದರು. ಅದು "ಸುಂದೋಪಸುಂದ" ಎಂಬ ಪೌರಾಣಿಕ ಕಥೆ. ಅದರಲ್ಲಿ ಗಣಸ್ತುತಿಯಾದ ಮೇಲೆ ಪೂಜಾರಿ ಮತ್ತು ಸಾರಥಿಯು ಅಡ್ಡಸೋಗು ತಂದು ನಾಟಕದ ಉದ್ದೇಶ, ಈಗಿರುವ ಸ್ಥಿತಿಗತಿಗಳು ಎಲ್ಲವನ್ನೂ ಹೇಳಿ ಅದಕ್ಕೆ ತಕ್ಕಂತೆ ಒಳಗಿನ ಸನ್ನಿವೇಶಗಳನ್ನು ಬೆಳೆಸ ಲಾಗಿದೆ. ಈ ಸುಂದೋಪಸುಂದರು ಸಮಗುಣದ, ಸಮಚಿತ್ತದ ಸೋದರರಾಗಿದ್ದು ಬ್ರಹ್ಮನ ವರಪಡೆದು ತುಂಬಾ ಬಲಿಷ್ಟರಾಗಿದ್ದರಿಂದ ಇವರ ಮಧ್ಯೆ ಒಡಕುಂಟು ಮಾಡಲು ನಾರದ, ಇಂದ್ರಾಣಿ, ಇವರೆಲ್ಲ ಸಂಚುಮಾಡಿ ಹೆಣ್ಣು ಮತ್ತು ಹೆಂಡವನ್ನು

ಇವರ ಬಳಿಗೆ ಕಳಿಸುತ್ತಾರೆ. ಆಗಲೇ ಪುರಾಣದ ತಿಲೋತ್ತಮೆ ಸೃಷ್ಟಿಯಾದದ್ದು. ಈ ತಿಲೋತ್ತಮೆ ಒಂದು ಕೈಯಲ್ಲಿ ದೇವಲೋಕದ ಸುರೆಯನ್ನು ಹಿಡಿದುಕೊಂಡು ಬಂದು ಈ ಸೋದರರ ಮುಂದೆ ಸುಳಿದಾಡಿ ಅವರಲ್ಲಿ ಕಾಮಬೀಜವನ್ನು ಬಿತ್ತುತ್ತಾಳೆ. ಮಾನವ ಸಹಜ ಬಯಕೆಗಳಿಗೆ ಬಲಿಬಿದ್ದು ಈ ಸೋದರರು ಒಬ್ಬರಿಂದ ಒಬ್ಬರು ಹತರಾಗುತ್ತಾರೆ. ದೇವತೆಗಳ ಒಡೆದು ಆಳುವ ನೀತಿಯಿಂದ ತಮ್ಮ ನಾಡನ್ನೇ ಸ್ವರ್ಗವಾಗಿಸಲು ಹೊರಟ ಈ ಒಗ್ಗಟ್ಟಿನ, ಒಮ್ಮನದ ಸೋದರರ ಕತೆ ದುರಂತ ಮಯವಾಗುತ್ತದೆ. ಈ ಕತೆಯಲ್ಲಿ ದೇವತೆಗಳು ನಡೆಸುವ ಸಂಚಿಗೂ, ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಆಳುವ ಪ್ರಭುಗಳ ಒಡೆದು ಆಳುವ ನೀತಿಗೂ ಸಂಬಂಧವಿದೆ. ತುಳಿತಕ್ಕೊಳಗಾದವರ ಸಂಕೇತವಾಗಿ ಈ ಸುಂದೋಪಸುಂದರು ನಿಲ್ಲುತ್ತಾರೆ. ಈ ನಾಟಕವನ್ನು ಕೇವಲ ಆರು ದಿನಗಳಲ್ಲಿ ರಂಗದ ಮೇಲೆ ತಂದದ್ದು ಸಮುದಾಯದ ವೈಶಿಷ್ಟ್ಯ. ಕೊಂಡಜ್ಜಿಯಲ್ಲಿ ಒಂದು ಪ್ರಯೋಗವಾಗಿ, ದಾವಣಗೆರೆಯಲ್ಲಿ ಒಂದು ಪ್ರಯೋಗವಾಯಿತು. ಸಾಕಷ್ಟು ಆರೆಕೊರೆಗಳಿದ್ದರೂ ಇದೊಂದು ನೂತನ ಗಮನಾರ್ಹ ಪ್ರಯೋಗ. ●

---

## ಸ್ವೀಕಾರ

**ಗೀತಗಾರುಡಿ** (ಭಾವಗೀತೆಗಳು) ರೂ. 7; ಲೇಖಕ : ದೊಡ್ಡರಂಗೇಗೌಡ ಭರತ-ಸ್ಮಿತಾ ಪ್ರಕಾಶನ, ಬೆಂಗಳೂರು – 19.

**ವೃತ್ತ** (ಕಾದಂಬರಿ) ರೂ. 18; ಲೇಖಕ : ಕೃಷ್ಣಮೂಸಡಿ

**ಹಂತ** (ಕಾದಂಬರಿ) ರೂ. 12; ಲೇಖಕ : ಕುಂದರನಾಡ ಪಾಟೀಲ

**ಬೀಜ** (ಕಾದಂಬರಿ) ರೂ. 26 ಲೇಖಕ : ಶಾಂತಿನಾಥ ದೇಸಾಯಿ

ಈ ಮೂರು ಪುಸ್ತಕಗಳ ಪ್ರಕಾಶಕರು : ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು-1.

**ಕುದುರೆ ಬಂತು ಕುದುರೆ**: ರೂ. 8, ಲೇ : ರಾಮಚಂದ್ರದೇವ, ಟಿ. ಎನ್. ನರಸಿಂಹನ್.

**ದೊಡ್ಡಪ್ಪ** : ರೂ. 8, ಲೇ : ಗೋಪಾಲ ವಾಜಪೇಯಿ, ಅಕ್ಷರ ಪ್ರಕಾಶನ, ಸಾಗರ.

---

# ವಿಶ್ವಕಥಾಲೋಕದ ಮನುಷ್ಯ

ಬಿದರಹಳ್ಳಿ ನರಸಿಂಹಮೂರ್ತಿ

೧

'ಕಥೆ' ಎಂಬುದು 'ಇತಿಹಾಸಕ್ಕೆ' ತತ್ಸಮ. ಇವೆರಡೂ ಮನುಷ್ಯನನ್ನು ಕುರಿತು ಬರೆಯುತ್ತವೆ. ಒಂದು ವ್ಯತ್ಯಾಸವೆಂದರೆ ಕಥೆಗಾರ ಕಲ್ಪಿಸಿಕೊಳ್ಳುವ ಮನುಷ್ಯ ಪುರಾವೆ – ದಾಖಲೆಗಳಿಗಿಂತ ಕಥೆಗಾರನ ವೈಯಕ್ತಿಕ ತರ್ಕವನ್ನು ಹೆಚ್ಚು ಅವಲಂಬಿಸಿರುತ್ತಾನೆ. ಇತಿಹಾಸಕಾರ ಕಲ್ಪಿಸುವ ಮನುಷ್ಯ ಇತಿಹಾಸಕಾರನ ವೈಯಕ್ತಿಕ ತರ್ಕಕ್ಕಿಂತ ಹೆಚ್ಚು ಪುರಾವೆ-ದಾಖಲೆಗಳನ್ನು ಅವಲಂಬಿಸಿರುತ್ತಾನೆ. ಆದರೂ ಇತಿಹಾಸಕಾರ ಕಥೆ ಹೇಳಿಬಿಟ್ಟಿರುವ ಹಾಗೂ ಕಥೆಗಾರ ಇತಿಹಾಸ ಕಟ್ಟಿ ಕೊಟ್ಟಿರುವ ಉದಾಹರಣೆಗಳಿಗೆ ಕೊರತೆಯಿಲ್ಲ. ಈ ದೃಷ್ಟಿಯಿಂದ 'ವಿಶ್ವಕಥಾ ಕೋಶ' ನಮಗೆ ಮುಖ್ಯವಾಗುತ್ತದೆ.

ಇನ್ನೊಂದು ರೀತಿಯಲ್ಲಿ 'ಕಥೆ' ಬದುಕು ಎಂಬುದರ ತದ್ಭವ. ಬದುಕಿನ ಅನುಭವ ಕಥೆಗೆ ಹುಟ್ಟುಹಾಕುತ್ತದೆ. ಪ್ರತಿಯೊಬ್ಬ ಮನುಷ್ಯನ ಬದುಕೂ ತನ್ನದೇ ಆದ ದೃಷ್ಟಿಕೋನದಿಂದ ವಿಶಿಷ್ಟವಾಗುತ್ತದೆ. ಹಾಗೆಯೇ ಪ್ರತಿಯೊಂದು ಕತೆಯೂ ಒಂದು ವಿಶಿಷ್ಟ ಅನುಭವಕ್ಕೆ ಮಾಯಾದರ್ಪಣವಾಗಲು ಹವಣಿಸುತ್ತದೆ. ವಿಶ್ವದ ಮೂಲೆ ಮೂಲೆಗಳಿಂದ, ಕಾಲದ ಬೇರೆ ಬೇರೆ ಘಟ್ಟಗಳಿಂದ ಆಯ್ದ ಇಂಥ ನೂರಾರು ಅನುಭವಗಳ ಸಮುದಾಯ ಇಡಿಯಾದ ಮನುಷ್ಯ ಬದುಕಿನ ಆಳ-ಅಗಲ ಗಳನ್ನು ಪರಿಚಯಿಸುತ್ತದೆ. ದೇಶ ಮತ್ತು ಕಾಲಗಳ ವ್ಯಾಪ್ತಿಯಲ್ಲಿ ಮನುಷ್ಯನ ಸಮಗ್ರತೆಯ ಪಕ್ಷಿನೋಟ ನೀಡುವ ದೃಷ್ಟಿಯಿಂದಲೂ 'ವಿಶ್ವಕಥಾಕೋಶ' ನಮಗೆ ಮುಖ್ಯವಾಗುತ್ತದೆ.

'ವಿಶ್ವಕಥಾಲೋಕ'ದ 'ಮನುಷ್ಯ'ನಿಗೆ ಕುತೂಹಲಕರ ಮುಖಗಳು : ಸಂಗೀತ ಧರ್ಮಶಾಸ್ತ್ರಗಳು ದಕ್ಕದೆ ಯುದ್ಧಕಲೆ ಹಿಂಸಾಚಾರಗಳಿಗೆ ಹೆಸರುವಾಸಿಯಾಗಿ ಹಳ ಪಂಡಗಳಲ್ಲಿ ಬೀಳುವ ಕ್ರೂರ ಸೇನಾನಿ; ತನಗೆ ಮಕ್ಕಳಿಲ್ಲದೆ ಹಳ್ಳಿಯ ಮಕ್ಕಳ ಹಸಿವೆ ಗೆಲ್ಲ ತಳ್ಳುಲೆ ಹೃದಯವಾಗುವ ತಾಯಿ: ಕೂದಲು ನೆರೆತರೂ ಹರೆಯದ ಹುಡುಗಿ

ಯುರೆದುರು ಪ್ರೇಮಕಾವ್ಯದ ಹೊಳೆ ಹರಿಸುವ ಮುದಿ ಕವಿ; ಮ್ಯಾಟನಿಯಂ ಕಡೆ ಘಳಿಗೆಯಲ್ಲಿ ತಡೆಯಲಾರದೆ ಚಡ್ಡಿಯಲ್ಲಿ ಉಚ್ಚೆ ಹೊಯ್ದುಕೊಳ್ಳುವ ಪುಟ್ಟ ಹುಡುಗ; ದೇಶ ಸರ್ವಾಧಿಕಾರದಡಿ ಕಂಗೆಟ್ಟಾಗ ಹೆಲಿಕಾಪ್ಟರಿನಿಂದ ಕರಪತ್ರ ತೂರಾಡಿ ಶತೃಗಳ ಗುಂಡಿಗೆ ಬಲಿಯಾಗುವ ಕ್ರಾಂತಿಕಾರಿ; ಟ್ರಾಮು ಬಸ್ಸುಗಳಲ್ಲಿ ಪ್ರಯಾಣಿಸುವಾಗ ಕೈಕಾಲು ತಾಕಿಸಲು ತವಕಿಸುವ ಗಂಡಸರ ವ್ಯಕ್ತಿತ್ವ ವಿಶ್ಲೇಷಿಸುವ ಕಿಲಾಡಿ ಹುಡುಗಿ; ತನ್ನ ಬಿಡುಗಡೆಗೆ ಶಿಫಾರ್ಸು ಮಾಡುವ ಮೇಜರ್‌ನ ಪತ್ನಿಯನ್ನು ಮಾತಾಡಿಸುತ್ತಲೆ ಅವಳ ಕಿವಿಯ ಹರಳುಗಳನ್ನು ಗೊತ್ತಾಗದಂತೆ ಕದಿಯುವ ಚಾಣಾಕ್ಷ ಕಳ್ಳ; ಪುಟ್ಟ ಬೆರಳುಗಳನ್ನು ಪಿಯಾನೊ ಮೇಲಾಡಿಸಿ ಕನಸಿನ ರಾಜ್ಯ ನಿರ್ಮಿಸಿದ ಹರೆಯದ ಹುಡುಗಿ, ಕಲಾವಿಮರ್ಶಕ, ವೃದ್ಧ ರಾಜಕುಮಾರಿ ಎಲ್ಲರ ಹೃದಯ ಸೂರೆಗೊಳ್ಳುವ ಬಾಲಮೇಧಾವಿ; ಹೆರಿಗೆನೋವು ತಾಳದೆ ಸತ್ತ ಹೆಂಡತಿಯ ಹೆಣದ ಬಟ್ಟೆಗೆಂದು ಭಿಕ್ಷೆ ಎತ್ತಿ ಹೆಂಡ ಕುಡಿದು ಕುಣಿದಾಡುವ ಕ್ಷುದ್ರಗಂಡ; ದಾಂತೆಯ ಮಹಾಕಾವ್ಯ ಚರ್ಚಿಸುವುದು ಮತ್ತು ಹದವಾಗಿ ಬೇಯಿಸಿದ ಏಡಿಯನ್ನು ತಿನ್ನುವುದರ ನಡುವೆ ಓಲಾಡುವ ಮಧ್ಯಮ ವರ್ಗದ ವಿದ್ಯಾರ್ಥಿ; ಬಂಗಾರದ ಬೆನ್ನು ಹತ್ತಿದ ಬಿಳಿಯರು ಸ್ಥಳೀಯ ಕರಿಯರ ಹಳ್ಳಿಗಳನ್ನು ಆಕ್ರಮಿಸಿಕೊಂಡು ಅವರನ್ನ ಕಾಡಿಗೆ ಓಡಿಸಿದ ರಾತ್ರೋರಾತ್ರಿ ತನ್ನ ಹಟ್ಟಿಗೆ ವಾಪಸ್ ಬಂದು ಪ್ರಾಣ ಬಿಡುವ ಆದಿವಾಸಿ ಮುದುಕ; ಗಂಡ ತಾಯಿ ಅಣ್ಣ ಅತ್ತಿಗೆ ಯಾರ ಪ್ರೀತಿಯೂ ಸಿಕ್ಕದೆ ಅವರ ಸ್ವಾರ್ಥಕ್ಕೆ ಜೀತದಾಳಿನಂತೆ ದುಡಿದು ಸಾಯುವ ಮಣ್ಣಿನ ಬೊಂಬೆಯಂಥ ಹೆಣ್ಣು ಜೀವ; ಉಪವಾಸವನ್ನೆ ಅಭ್ಯಾಸ ಮಾಡಿಕೊಂಡು ಪ್ರದರ್ಶನದ ವಸ್ತುವಾಗುವ ಪರಾವಲಂಬಿ ದಲಿತ; ಕ್ಷುಲ್ಲಕ ವಿಷಯಕ್ಕೆ ಜಿದ್ದು ಕಟ್ಟಿ ಸೆರೆಮನೆ ಸೇರಿ ಹದಿನೈದು ವರ್ಷವಿಡೀ ಸಿಕ್ಕ ಸಿಕ್ಕ ಪುಸ್ತಕ ಓದಿ ಮಿದುಳಿಗೆ ಅಜೀರ್ಣ ಮಾಡಿಕೊಳ್ಳುವ ಭ್ರಾಂತ ಯುವಕ; ಮನೆಯಲ್ಲಿ ಯಾರಾದರೂ ಸತ್ತರೆ ಮಾತ್ರ ನೆರೆಯವರು ಕರುಣೆಯಿಂದ ತಿನ್ನಲು ಏನಾದರೂ ಕೊಟ್ಟಾರು ಎಂಬ ಬರಗಾಲದಲ್ಲಿ ಹಾಸಿಗೆ ಹಿಡಿದ ಅಣ್ಣ ಬೇಗ ಸಾಯಲಿ ಎಂದು ಪರಿತಪಿಸುವ ಕಂಗಾಲು ಹುಡುಗ. ಹೀಗೆ ಪಟ್ಟಿ ಬೆಳೆಯುತ್ತದೆ.

ಇಲ್ಲಿನ ಕಥೆಗಳನ್ನ ವಿಶ್ಲೇಷಿಸಿದಾಗ ವಿಶ್ವಕಥಾಲೋಕದ ಮನುಷ್ಯ ಪ್ರತಿನಿಧಿ ನಮಗೆ ಮತ್ತಷ್ಟು ಸ್ಪಷ್ಟವಾಗುತ್ತಾನೆ. ಬದುಕು ಮತ್ತು ಇತಿಹಾಸ ಕುರಿತ ನಮ್ಮ ಅರಿವನ್ನ ಹಿಗ್ಗಿಸುತ್ತಾನೆ. ಕಥಾ ಕೋಶದ ಉತ್ತಮ ಕಥೆಗಳನ್ನಷ್ಟೆ ಪಟ್ಟಿ ಮಾಡಿದರೂ ಅವೆಲ್ಲವನ್ನೂ ಈ ಪ್ರಬಂಧದ ಚೌಕಟ್ಟಿನಲ್ಲಿ ಚರ್ಚಿಸಲು ಸಾಧ್ಯವಿಲ್ಲ. ನನ್ನನ್ನ ತುಂಬ ಕಾಡಿದ ಕಥೆಗಳಲ್ಲಿ ಕೆಲವನ್ನ ಮಾತ್ರ ಇಲ್ಲಿ ಚರ್ಚಿಸುತ್ತೇನೆ. ಈ ಕಥೆಗ

ಕಥೆಗಳನ್ನ ಆಯ್ದುಕೊಳ್ಳಲು ಮುಖ್ಯ ಕಾರಣವೇದರೆ ಅವು ಒಂದಕ್ಕೊಂದು ಸಾಕಷ್ಟು ಭಿನ್ನವಾಗಿದ್ದು ವಿಶ್ವಮಾನವನ ವಿಭಿನ್ನ ಚಹರೆಪಟ್ಟಿಗಳನ್ನು ಚಿತ್ರಿಸುವ ಪ್ರಯತ್ನ ಮಾಡಿರುವುದು.

೨

ಪಿ. ಲಂಕೇಶರ 'ಕುರುಡು ಕಾಂಚಾಣ' (ಸಂಪುಟ ೧) ಎಂಬ ಕಥೆ ಹಣ ಹೇಗೆ ಮನುಷ್ಯ ಸಂಬಂಧಗಳನ್ನ ನಿಯಂತ್ರಿಸುತ್ತದೆ ಎಂಬುದನ್ನ ತೋರಿಸುತ್ತದೆ. ಇಲ್ಲಿನ ನಾಯಕ ಸ್ವಂತ ಖುಷಿಗಳ ಲೆಕ್ಕಾಚಾರದಲ್ಲಿ ಮುಳುಗಿರುವ ಮಧ್ಯಮವರ್ಗದ ವ್ಯಕ್ತಿ. ಬೆಚ್ಚಗೆ ಜೋಡಿಗೆಮನೆ, ವೆಚ್ಚಕ್ಕೆ ಕೈತುಂಬ ಸಂಬಳ, ಇಚ್ಛೆಯನ್ನರಿಯಲು ಹೆಣಗಾಡುವ ಹೆಂಡತಿ ಇದ್ದಾರೆ ಮನೆ ಮುಂದಿನ ಮಲ್ಲಿಗೆ ಬಳ್ಳಿ ಕಮಾನು ಹತ್ತಿ ಹೂಬಿಡಲು ಹೊರಟಾಗ ಇವನಿಗೆ ಪ್ರಪಂಚ ತನ್ನ ಬಗ್ಗೆ ಎಷ್ಟು ಒಳ್ಳೆಯದಾಗಿದೆ ಎನಿಸುತ್ತದೆ ತಿಂಗಳ ಕೊನೆ ದಿನ ಆರಾಮವಾಗಿ ಕೂತು ಐರಿಷ್ ಕ್ರಾಂತಿಯ ಬಗ್ಗೆ ಪುಸ್ತಕವೊಂದನ್ನು ಓದುತ್ತಿದ್ದಾನೆ. ಮರುದಿನ ಸಿಗುವ ಸಂಬಳದಿಂದಾಗಿ ಈ ಓದು ಅವನಿಗೆ ತುಂಬ ಹಿತಕೊಡುತ್ತದೆ. ಹೆಂಡತಿ ಕಾಫಿ ಕೊಟ್ಟು ಮಲ್ಲಿಗೆ ಬಳ್ಳಿ ಮೇಲೆ ಕೂತ ಹಕ್ಕಿಯ ಬಗ್ಗೆ ಪುಟ್ಟ ಪ್ರಶ್ನೆ ಕೇಳುತ್ತಾಳೆ. ಕ್ಷೌರಕ್ಕೆ ಹೋಗಲು ನೆನಪಿಸುತ್ತಾಳೆ. ನಾಯಕ ಸಾಕಷ್ಟು ಮಾತುಗಾರನಾದರೂ ಇನ್ನೊಬ್ಬರು ಮಾತನಾಡುವುದನ್ನು ಸಹಿಸಲಾರ. ಅದರಲ್ಲೂ ಕ್ಷೌರಿಕರ ಮಾತೆಂದರೆ ಆಗದು. ಹೀಗಾಗಿ ಮಿತಭಾಷಿ ಮೈಲಿಮುಖದ ಕ್ಷೌರಿಕನ ಅಂಗಡಿಗೆ ಹೋಗುತ್ತಾನೆ. ಅವನ ಮಾತು ನೋಡಿ: "ನನ್ನ ಪಾಲಿಗೆ ಅವನು ಯಂತ್ರವಾಗಿದ್ದ. ನಾನು ಅವನ ಯಂತ್ರವಾಗಿದ್ದೆ. ಹಜಾಮನ ಸ್ನೇಹ ನನಗೇಕೆ ಬೇಕು?" ಯಾವತ್ತೂ ಮಾತಾಡದ ಕ್ಷೌರಿಕ ಅವತ್ತು ಇವನ ತಾಯಿಯ ಬಗ್ಗೆ ವಿಚಾರಿಸುತ್ತಾನೆ. ಯಾಕೆ ಅಂದರೆ "ಸುಮ್ಮನೆ" ಎನ್ನುತ್ತಾನೆ.

ಮರುದಿನ ನಾಯಕ ಸಂಬಳಕ್ಕೆ ಹೋಗುವ ಸಡಗರದಲ್ಲಿದ್ದಾಗ ಕ್ಷೌರಿಕ ಅನಿರೀಕ್ಷಿತವಾಗಿ ಗೇಟು ತೆರೆದು ಬರುತ್ತಾನೆ. ಅವನ ತಾಯಿ ಸತ್ತಿದ್ದಾಳೆ. "ಹೆಣ ಹಾಗೆ ಬಿದ್ದಿದೆ ಸಾರ್. ಹದಿನೈದು ರೂಪಾಯಿ ಬೇಕಿತ್ತು" ಅನ್ನುತ್ತಾನೆ. ಭಾವನೆಗಳನ್ನ ತೋರುವುದು ದೌರ್ಬಲ್ಯ ಎಂಬುದು ನಾಯಕನ ಅಭಿಮತ. ಮಧ್ಯಾಹ್ನ ಬಾ ಎನ್ನುತ್ತಾನೆ. ಸರಿ, ಮನೆ ಬಾಡಿಗೆ, ಹೊಸ ಮಂಚ, ಮಗುವಿಗೆ ಚೈನು - ಸ್ವೆಟರು - ಕಾಲುಚೀಲ ಇತ್ಯಾದಿ ಬಜೆಟ್ ತಯಾರಿಸಿರುವ ಹೆಂಡತಿ "ಹಾದಿಯಲ್ಲಿ ಹೋಗುವ ಭಿಕಾರಿಗಳಿಗೆಲ್ಲ ದುಡ್ಡು ಚೆಲ್ಲುವುದನ್ನು" ಖಂಡಿಸುತ್ತಾಳೆ.

ಮಧ್ಯಾಹ್ನ ಬಂದಾಗ "ಇನ್ನೂ ಸಂಬಳ ತಗೊಂಡಿಲ್ಲ ಸಂಜೆ ಬಾ" ಎನ್ನುತ್ತಾನೆ. "ಐದು ರೂಪಾಯಿ ಮಾತ್ರ ಕೊಡಬಹುದು" ಎಂದೂ ಅವನ ಕುಲ ಗೋತ್ರ ವಿಚಾರಿಸುತ್ತಾನೆ. ಅವನ ಸ್ಥಿತಿಗತಿ ನೋಡಿ ವಾಪಸ್ ಕೊಡದೆ ಹೋದರೆ ಎಂದು ಹೆದರಿಕೆಯಾಗುತ್ತದೆ. ಸಂಜೆ ಅವನು ಬಂದಾಗ ಮನೆಯಲ್ಲಿಲ್ಲ ಎಂದು ಹೇಳಿಸುತ್ತಾನೆ. ಅದೇ ಹಣದಲ್ಲಿ ಹೆಂಡತಿಗೆ ವಾಯಿಲ್ ಸೀರೆ ಕೊಡಿಸಬಹುದು, ಇಂಗ್ಲಿಷ್ ಸಿನೆಮಾ ನೋಡಬಹುದು. ಮಸಾಲೆದೋಸೆ ತಿನ್ನಬಹುದು ಎಂದು ಕೊಳ್ಳುತ್ತಾನೆ.

ಮುಂದಿನ ತಿಂಗಳು ಕ್ಷೌರಕ್ಕೆ ಹೋದಾಗ ಸೆಲೂನ್ ಬಾಗಿಲು ಮುಚ್ಚಿ ಹೋಗಿರುತ್ತದೆ.

ಅತ್ಯಂತ ಮಾನವೀಯ ಪ್ರಸಂಗದಲ್ಲೂ ಕ್ಷೌರಿಕನ ಕಷ್ಟಕ್ಕೆ ಒದಗಲಾರದಂತೆ ನಾಯಕನನ್ನ ತಡೆಯುವುದು ಅವನ ವರ್ಗಪ್ರಜ್ಞೆ. ಹಣ ಈ ವರ್ಗಪ್ರಜ್ಞೆಯನ್ನು ಕಾಯ್ದಿರಿಸುವ ಶಕ್ತಿ. ಅತಿಯಾದ ಸ್ವಹಿತಚಿಂತನೆ ಇತರರ ಒಳ್ಳೆಯ ತನವನ್ನ ಅಲ್ಲಗಳೆಯುತ್ತದೆ ಎಂಬುದಕ್ಕೆ ನಾಯಕನ ಹೆದರಿಕೆಗಳೆ ಸಾಕ್ಷಿ. ತಾನು ಸಾಲ ಕೊಡದಿದ್ದುದಕ್ಕೆ ಮುಂದಿನ ಸಲ ಕ್ಷೌರ ಮಾಡುವಾಗ ಆತ ತನ್ನ ಕಂತ್ತಿಗೆಯನ್ನ ಕೊಯ್ದಾನು ಎಂಬ ಮಟ್ಟಕ್ಕೂ ಹೋಗುತ್ತದೆ ಈ ಹೆದರಿಕೆ. ಆದರೆ ವ್ಯತಿರಿಕ್ತವಾಗಿ ಆ ಬಡವ ಸೆಲೂನು ಮುಚ್ಚಿ ದಾರಿದ್ರ್ಯದ ಹಾದಿ ಹಿಡಿದಿರುತ್ತಾನೆ. ಹಣದಿಂದ ಪ್ರೇರಿತವಾದ ಇಂಥ ಹೆದರಿಕೆಗಳು ಮತ್ತು ಇಲ್ಲದವರ ಕುರಿತ ತಿರಸ್ಕಾರ ವರ್ಗಗಳ ನಡುವಿನ ಕಂದರವನ್ನ ಸ್ಪಷ್ಟವಾಗಿ ತೋರಿಸುತ್ತವೆ. ಪರ್ಯಾಯವಾಗಿ ನಾವು ಪೋಷಿಸುತ್ತಿರುವ ವ್ಯವಸ್ಥೆಗೆ ಕನ್ನಡಿ ಹಿಡಿಯುತ್ತವೆ. ಕ್ರಿಯಾಶಾಲಿಯಾಗದ ನಾಯಕನ ತೊಳಲಾಟ ತನ್ನಷ್ಟಕ್ಕೆ ತಾನೆ ವ್ಯಂಗ್ಯವಾಗುತ್ತದೆ.

ಹೀಗೆ ಮಧ್ಯಮವರ್ಗದ ಬದುಕಿನ ಮೂಲಕ ಇಡಿ ವ್ಯವಸ್ಥೆಯನ್ನ ವ್ಯಾಖ್ಯಾನಿಸುವ ಕತೆಗಳೆಂದರೆ 'ದಾಂತೆ ಮತ್ತು ಏಡಿ' (ಸಂ. ೧೦) 'ಪ್ರೇಮ ಮತ್ತು ರೊಟ್ಟಿ' (ಸಂ. ೧೪) 'ಕಮಿಷನರ್ ಸಾಹೇಬರ ಕ್ರಿಸ್‌ಮಸ್' (ಸಂ. ೧೨) ಮತ್ತು 'ಇರುವೆಗಳು' (ಸಂ. ೫)

ನೈಜೀರಿಯಾದ ಚಿನುವ ಅಚೇಬೆಯ ಕಥೆ 'ಸೇಡಿನ ಸಾಲಗಾರ' (ಸಂ. ೨) ನಾಗರಿಕ ಕ್ರೌರ್ಯದ ಒಂದು ಮಾದರಿಯನ್ನು ಚಿತ್ರಿಸುತ್ತದೆ. ಶ್ರೀ ಮತ್ತು ಶ್ರೀಮತಿ ಎಮೆನಿಕೆ ಗೌರವಾನ್ವಿತ ಹುದ್ದೆಗಳಲ್ಲಿರುವವರು. ದೇಶೀಯರೆ ಆದರೂ

ವಿದ್ಯಾಭ್ಯಾಸದಿಂದಾಗಿ ಪ್ರತಿಷ್ಠಿತರೆನಿಸಿ ಸಾಮಾಜಿಕ ಘನತೆಯ ಏಣಿ ಏರಿದವರು. ಇಬ್ಬರೂ ಕಾರುಗಳಲ್ಲಿ ಕೆಲಸಕ್ಕೆ ಹೋದಾಗ ಇವರ ಮಕ್ಕಳನ್ನ ನೋಡಿಕೊಳ್ಳಲು ಹಾಗೂ ಅವರ ಆರೈಕೆಮಾಡಲು ಯಾರಾದರೂಬೇಕು. ಆದರೆ ಇತ್ತೀಚೆಗೆ ಸರಕಾರ ತೆರೆದಿರುವ ಉಚಿತ ಪ್ರಾಥಮಿಕ ಶಿಕ್ಷಣದ ತರಗತಿಗಳಿಂದ ಆಕರ್ಷಿತರಾಗಿ ಕೆಲಸದವರೆಲ್ಲ ಬಿಟ್ಟುಹೋಗುತ್ತಿರುವುದು ಶ್ರೀ ಮತ್ತು ಶ್ರೀಮಂತಿ ಎಮೆನಿಕೆಗೆ ದೊಡ್ಡ ಸಮಸ್ಯೆಯಾಗಿಬಿಟ್ಟಿದೆ. ಸರ್ಕಾರ ಈ ಯೋಜನೆಯನ್ನ ರದ್ದುಗೊಳಿಸ ಬೇಕೆಂದು ಮಧ್ಯಮವರ್ಗದ ಮೇಧಾವಿಗಳು ಹಾಗೂ ರಾಷ್ಟ್ರೀಯ ಪತ್ರಿಕೆಗಳು ತರುತ್ತಿರುವ ಒತ್ತಾಯದಲ್ಲಿ ಈ ದಂಪತಿಗಳೂ ಭಾಗಿಯಾಗಿದ್ದಾರೆ.

ಈ ನಡುವೆ ಇವರು ತಮ್ಮ ಮರ್ಸಿಡಿಸ್-೨೨೦ ಎಸ್ ಕಾರಲ್ಲಿ ಹಳ್ಳಿಗೆ ಹೋಗಿ ಮಾರ್ಥಾ ಎಂಬ ಬಡವಿಧವೆಯ ಹತ್ತು ವರ್ಷದ ಮಗಳು ಮೆರೋನಿಕಳನ್ನ ಕೆಲಸದಾಳಾಗಿ ಕರೆತರುತ್ತಾರೆ. ವರ್ಷಕ್ಕೆ ಐದು ಪೌಂಡು ಸಂಬಳ-ಊಟ-ಬಟ್ಟೆ ಕರಾರಿಗೆ ತಾಯಿ ಸುಲಭವಾಗಿ ಒಪ್ಪಿದರೂ ಮಗಳನ್ನ ಹೇಗೆ ನೋಡಿ ಕೊಳ್ಳುತ್ತಾರೊ ಎಂದು ಅನುಮಾನಿಸುತ್ತಾಳೆ. ಶ್ರೀ ಎಮೆನಿಕೆ "ನನ್ನ ಹೆಂಡತಿ ಒಬ್ಬ ಸಮಾಜಕಲ್ಯಾಣ ಅಧಿಕಾರಿ. ಮಕ್ಕಳನ್ನ ಹೇಗೆ ನೋಡಿಕೊಳ್ಳಬೇಕೆಂದು ಅವಳಿಗೆ ಗೊತ್ತು. ನಿನ್ನ ಮಗಳು ನನ್ನ ಮನೆಯಲ್ಲಿ ಸಂತೋಷವಾಗಿರ್‍ತಾಳೆ ಅಂತ ಹೇಳಬಲ್ಲೆ. ಆಕೆ ಮಾಡಬೇಕಾದ್ದಿಷ್ಟೆ. ನನ್ನ ಹೆಂಡತಿ ಕಛೇರಿಗೆ, ಹಿರಿಯ ಮಕ್ಕಳು ಶಾಲೆಗೆ ಹೋದಾಗ ನಮ್ಮ ಪುಟ್ಟ ಮಗುವಿಗೆ ಹಾಲು ಕುಡಿಸಬೇಕು" ಎನ್ನುತ್ತಾನೆ. ಮೆರೊನಿಕಳಿಗೆ ಶಾಲೆಗೆ ಹೋಗಬೇಕೆಂಬ ಆಸೆಯೆಂದು ತಾಯಿ ಹೇಳಿದಾಗ "ಅವಳಿನ್ನೂ ಮಗು. ಶಾಲೆಗೆ ಹೋಗಲು ಇನ್ನೂ ಬೇಕಾದಷ್ಟು ಕಾಲವಿದೆ" ಎನ್ನುತ್ತಾರೆ! ತಮ್ಮ ಮಗು ದೊಡ್ಡದಾದ ಮೇಲೆ ತಾವೆ ಅವಳನ್ನು ಶಾಲೆಗೆ ಕಳಿಸುತ್ತೇವೆ ಇತ್ಯಾದಿ ಮರಸೆ ಮಾತಾಡಿ ಹುಡುಗಿಯನ್ನ ಒಯ್ಯುತ್ತಾರೆ.

ಮೆರೊ ಹೊಂದಿಕೊಳ್ಳುತ್ತಾಳೆ. ಅಳುವ ಮಗುವನ್ನ ಸಾಂತ್ವನಗೊಳಿಸಲು ಚುಟುಕಗಳನ್ನು ಕಟ್ಟಿ ಹಾಡುತ್ತಾಳೆ. ತನ್ನನ್ನು ಶಾಲೆಗೆ ಕರೆದೊಯ್ಯೆಂದು ಕಾರಿಗೆ ಹೇಳುವ ಅವಳ ಚುಟಕ ಎಲ್ಲರಿಗೆ ಮೆಚ್ಚಿಕೆಯಾಗುತ್ತದೆ. ಇನ್ನೊಂದು ದಿನ ಕೆಂಪು ಮಸಿಯನ್ನ ತುಟಿಗೆ ಬಳಿದುಕೊಂಡಿರುತ್ತಾಳೆ. ದಂಪತಿಗಳು ಬಂದು ನಗುತ್ತಾರೆ. ಅದು ಲಿಪ್‌ಸ್ಟಿಕ್ ಅಲ್ಲ ವಿಷ ಎಂದು ಎಚ್ಚರಿಸುತ್ತಾರೆ. ಮಗು ಬೇಗನೆ ಬೆಳೆಯುತ್ತಿಲ್ಲ ಎಂದು ಅಸಹನೆಯಾಗುತ್ತದೆ ಮೆರೋಗೆ. ಒಂದು ದಿನ ಅದಕ್ಕೆ ಕೆಂಪು ಮಸಿ ಕುಡಿಸುತ್ತಾಳೆ. ಬಟ್ಟೆ ಕರೆಯಾದಾಗ ಒಗೆದು ಹಾಕುತ್ತಾಳೆ. ಶ್ರೀಮಂತಿ ಎಮನಿಕೆ ಬಂದು ರಕ್ತ ಹರಿಯುವಂತೆ ಬಾರಿಸುತಾಳೆ. ಕೂಡಲೆ ಹಳ್ಳಿಗೆ

ಒಯ್ದು ಬಿಟ್ಟು ಬರುತ್ತಾರೆ. ವಿಷಯ ಕೇಳಿ ಕಂಗಾಲಾದ ಪೂರ್ಥಾರ್ ಪುಂಗಳನ್ನ ಶಿಕ್ಷಿಸಲು ಹೋದಾಗ ಶ್ರೀಮತಿ ಎಮಸಿಕೆ ಹೇಳುವ ಮಾತು ಕೇಳಿ. "ನೀನು ನನ್ನೆದುರಿಗೆ ದಿಗ್ಭ್ರಮೆ ತೋರಿಸಬೇಕಾ......ನಿನ್ನ ಮಗಳು ಕೊಲೆ ಮಾಡುವುದನ್ನ ನನ್ನ ಮನೆಯಲ್ಲಿ ಕಲಿಯಲಿಲ್ಲ". ತಾಯಿ ಒಳಗೇ ಕುಸಿಯುತ್ತಾಳೆ. ಮಗಳನ್ನ ಹುಚ್ಚಾಬಟ್ಟೆ ಹೊಡೆದು ತಾನೆ ಅಳುತ್ತಾಳೆ. "ಅವನ ಎಲ್ಲ ಮಕ್ಕಳೂ ಶಾಲೆಗೆ ಹೋಗುತ್ತಾರೆ. ಎರಡು ವರ್ಷದ ಮಗು ಕೂಡ. ಆದರೂ ಹುಚ್ಚಿಲ್ಲ. ನನ್ನಂಥ ಬಡವಿಧವೆಯ ಮಕ್ಕಳು ಹೋಗಲು ಬಯಸಿದಾಗ ಮಾತ್ರ ಅದು ಹುಚ್ಚು. ಇದೇನು ಜೀವನ? ದೇವರೆ" ಎಂದು ಕೊರಗುತ್ತಾಳೆ.

ದಲಿತರಲ್ಲಿ ಆರ್ಥಿಕವಾಗಿ ಮುಂದುವರಿದವರು ಉಳಿದವರನ್ನ ಸೂಕ್ಷ್ಮವಾಗಿ ಮೆಟ್ಟಿನಿಲ್ಲುವ ಶೀತಲ ಕ್ರೌರ್ಯ ಕಥೆಯ ಉದ್ದಕ್ಕೂ ಹಾಸುಹೊಕ್ಕಾಗಿದೆ. ವಿದೇಶಿ ಆಕ್ರಮಣಕಾರರ ಹಿಂಸೆ, ಮುಂದುವರಿದ ಜನಾಂಗಗಳ ಶೋಷಣೆ ಒಂದು ತೆರನಾದರೆ ಇದು ಇನ್ನೊಂದು ತೆರ. ಬೇಲಿಯೇ ಹೊಲ ಮೆಯ್ದಂತೆ. ಮಗುವನ್ನ ಕೊಲ್ಲುವಂತೆ ವೆರೊಳನ್ನ ಪ್ರೇರೇಪಿಸುವುದು ಶಾಲೆಯ ತೀವ್ರ ಆಕರ್ಷಣೆ. ಆದೊಂದು ಹುಚ್ಚು ಎಂಬುದು ಎಮಸಿಕೆಯಂಥ ಬೂರ್ಜ್ವಾಗಳ ಮೂದಲಿಕೆ. ಜ್ಞಾನದ ಹಕ್ಕು ಯಾರಿಗುಂಟು ಯಾರಿಗಿಲ್ಲ? ಅದನ್ನ ನಿರ್ಧರಿಸುವ ಅಧಿಕಾರ ಇವರಿಗೆ ಕೊಟ್ಟದ್ದು ಯಾರು? ಬಡವರ ಅಜ್ಞಾನವನ್ನೆ ಬಂಡವಾಳ ಮಾಡಿಕೊಂಡು ತಮ್ಮ ವೈಭವ ಕಾಪಾಡಿಕೊಳ್ಳುವ ಶ್ರೀಮಂತರ ಮುಸಲತ್ತು, ಅಧಿಕಾರಸ್ಥರ ಬೇಕಾಬಿಟ್ಟಿತನ ಕತೆಯಲ್ಲಿ ದೀರ್ಘವಾಗಿ ಚರ್ಚಿತವಾಗಿದ್ದು ವೆರೊಳ ಕತೆಗೆ ಒಂದು ದಾರುಣ ಚೌಕಟ್ಟು ಒದಗಿಸುತ್ತವೆ. ಜನಾಂಗ ದ್ವೇಷದ ಮಾದರಿಗಾಗಿ 'ಪರಿಶುದ್ಧ ಮಾನವಕುಲ, (ಸಂ. ೧೪) ಮತ್ತು 'ವರದಿ' (ಸಂ. ೧೩) ಕತೆಗಳನ್ನೂ ಶೋಷಿತರ ಹೃದಯವಂತಿಕೆಗೆ ಕುರಿತಂತೆ 'ಎನ್‌ಗೂಲ' (ಸಂ. ೮), 'ಮಾರಿಕೊಂಡವರು (ಸಂ. ೧) ಹಾಗೂ 'ಮೊಗಸಾಲೆಯಲ್ಲಿ ಆತಿಥ್ಯ' (ಸಂ. ೨) ಕತೆಗಳನ್ನು ನೋಡಬಹುದು.

ಚಾರ್ಲ್ಸ್ ಡಿಕನ್ಸ್‌ನ 'ವಿಚಿತ್ರ ಕಕ್ಷಿದಾರ' (ಸಂ. ೯) ಶೋಷಿತರ ಸೇಡಿನ ಮನೋಭಾವವನ್ನ ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. ಲಂಡನ್ನಿನ ಕುಪ್ರಸಿದ್ಧ ವಕೀಲನೊಬ್ಬನನ್ನು ಕಾಣಲು ಜಾರ್ಜ್ ಹೆಯ್ಲಿಂಗ್ ಎಂಬ ಶ್ರೀಮಂತ 'ಕಕ್ಷಿದಾರ' ಬರುತ್ತಾನೆ. ಯಾವುದೋ ಒಬ್ಬ ವ್ಯಕ್ತಿಯ ಅನೇಕ ದೊಡ್ಡ ಮೊತ್ತದ ಸಾಲಪತ್ರಗಳನ್ನ ವಕೀಲನ ವಶಕ್ಕೆ ಕೊಟ್ಟು "ಕಾನೂನಿನ ಸರ್ವ ಶಕ್ತಿಯನ್ನು ಉಪಯೋಗಿಸಿ ಅವನನ್ನ ನಾಶಮಾಡಿ ಬೀದಿಯ ಭಿಕಾರಿಯಾಗಿ

ಕೊಳೆತು ಸಾಯೋ ಹಾಗೆ ಮಾಡಿ" ಎನ್ನುತ್ತಾನೆ. ಈ ಕೆಲಸಕ್ಕಾಗಿ ವಕೀಲ ಕೇಳುವ ಭಾರಿ ಮೊತ್ತಕ್ಕೆ ಕೂಡಲೆ ಚೆಕ್ ಬರೆದುಕೊಡುತ್ತಾನೆ. ಆ ಸಾಲಪತ್ರಗಳನ್ನ ಬೇರೆಯವರಿಂದ ಅವುಗಳ ಮೂರು ನಾಲ್ಕು ಪಟ್ಟು ಹಣ ತೆತ್ತುಕೊಂಡಿರುತ್ತಾನೆ. ಮೂರು ವರ್ಷಗಳವರೆಗೆ ಆ ವ್ಯಕ್ತಿಯನ್ನು ಹಣ್ಣುಗಾಯಿ ನೀರುಗಾಯಿ ಮಾಡಲಾಗುತ್ತದೆ. ನಂತರ ಅವನು ತಲೆಮರೆಸಿಕೊಂಡಿರುವ ಜಾಗ ಪತ್ತೆಮಾಡಿ ಹೆಯ್ಲಿಂಗ್ ಅವನನ್ನ ಮೂದಲಿಸುತ್ತಾನೆ. ಸೆರೆಮನೆಗೆ ಕಳಿಸುವೆ ಎನ್ನುತ್ತಾನೆ. ಮಗಳನ್ನ ಮೊಮ್ಮಗನನ್ನ ಜೈಲಲ್ಲಿ ಕೊಳೆಸಿ ಸಾಯಿಸಿದ ಪಶ್ಚಾತ್ತಾಪದಿಂದ ಮಗನನ್ನ ಸಮುದ್ರದಲ್ಲಿ ಕಳೆದುಕೊಂಡ ಅತೀವ ನೋವಿನಿಂದ ಆ ನಿರ್ವಿಣ್ಣ ಮುದುಕ ಪ್ರಾಣ ಬಿಡುತ್ತಾನೆ. ಅವನುಮುತ್ಯಾರೂ ಅಲ್ಲ. ಜಾರ್ಜ್ ಹೆಯ್ಲಿಂಗನ ಪಾಪ.

ರಕ್ತ ಸಂಬಂಧಿಗಳಲ್ಲಿ ಇಂಥ ವಿಚಿತ್ರ ಪ್ರತೀಕಾರದ ಬಯಕೆ. ತಮ್ಮಿಷ್ಟದಂತೆ ಮದುವೆಯಾದದ್ದಕ್ಕೆ ಏನೋ ಹುಡುಗ–ಹುಡುಗಿಯರ ಶ್ರೀಮಂತ ತಂದೆಗಳಿಬ್ಬರೂ ಅವರನ್ನ ಬೀದಿಗೆ ತಳ್ಳುತ್ತಾರೆ. ಅಳಿಯನಿಗೆ ಸಾಲ ಕೊಟ್ಟವರನ್ನ ಬಳಸಿಕೊಂಡು ಮಾವ ಅವನನ್ನ ನಿಗೂಢವಾದ ಮಾರ್ಗದಲ್ಲೇ ಸೆರೆಮನೆಗೆ ತಳ್ಳುತ್ತಾನೆ. "ಅಂದಿನ ದಿವಸಗಳಲ್ಲಿ ಕಾರಾಗೃಹದಲ್ಲಿ ಕೊಳೆಯುತ್ತಿದ್ದ ಸಾಲಗಾರರಿಗೆ ಬಿಡುಗಡೆಯ ಭರವಸೆಯಾಗಲಿ, ಸ್ವಾತಂತ್ರ್ಯದ ನಿರೀಕ್ಷೆಯಾಗಲಿ ಇದ್ದಿರಲಿಲ್ಲ ಎನ್ನುವ ಮಾತು ಕೇವಲ ಅಲಂಕಾರಿಕವಲ್ಲ." ಇಪ್ಪತ್ತು ವರ್ಷಗಳ ದಾರುಣ ಸೆರೆವಾಸ ಯುವಕನ ಆಸೆಗಳನ್ನ ಕಮರಿಸುತ್ತದೆ. ಸಾಲದೆಂಬಂತೆ ಅವನ ಮಗು ಹೊಟ್ಟೆಗಿಲ್ಲದೆ ಸಾಯುತ್ತದೆ. ಅವನ ಹೆಂಡತಿ ಕೊರಗಿ ಕೊರಗಿ ಅವನ ತೋಳುಗಳಲ್ಲೇ ಸಾಯುತ್ತಾಳೆ. ಈ ದುರ್ಭರ ಪ್ರಸಂಗಗಳು ಅವನ ಮಾನವೀಯ ಭಾವನೆಗಳನ್ನ ಪುಟ್ಟಪ್ಪರಾ ಸುಟ್ಟು ಹಾಕುತ್ತವೆ. ಅವನ ಕನಸುಗಳು ಸೇಡನ್ನ ಅಭಿನಯಿಸುತ್ತವೆ.

ತನ್ನ ಐಶ್ವರ್ಯ ಮಗನಿಗೆ ದಕ್ಕದಂತೆ ಉಯಿಲು ಬರೆಯುವುದರೊಳಗಾಗಿಯೇ ದಿಢೀರ್ ಸಾಯುವ ತಂದೆಯಿಂದಾಗಿ ಹೆಯ್ಲಿಂಗ್ ಬಿಡುಗಡೆ ಹೊಂದಿ ಧನಿಕನಾಗುತ್ತಾನೆ. ಹೆಂಡತಿಯ ಹೆಣದ ಮುಂದೆ ಮಾಡಿದ ಶಪಥ ಕಣ್ಣಮುಂದೆ ನಿಲ್ಲುತ್ತದೆ. ಅಕಸ್ಮಾತ್ತಾಗಿ ಸಮುದ್ರತೀರದಲ್ಲಿ ಭೇಟಿಯಾಗುವ ಮಾವನ ಮಗ ಮುಳುಗಿ ಸಾಯುವ ಹೊತ್ತಲ್ಲಿ ನಿರ್ದಯಿಯಾಗುತ್ತಾನೆ. ನಂತರ ಮಾವನನ್ನ ಬಲಿ ತೆಗೆದುಕೊಳ್ಳುತ್ತಾನೆ.

ಸಾಮಾನ್ಯ ಬರಹಗಾರನ ಕೈಯಲ್ಲಿ ಹಾಳಾಗಿ ಹೋಗುತ್ತಿದ್ದ ವಸ್ತು ಡಿಕನ್ಸ್‌ನ ಕಲಾವಂತಿಕೆಯಿಂದ ಉತ್ತಮ ಕತೆಯಾಗಿದೆ. ಲಂಡನ್ನಿನ ವಾಸ್ತವ ವಿವರಗಳು,

ಸೆರೆಮನೆಯ ವರ್ಣನೆ. ಮನೋವಿಶ್ಲೇಷಣಾತ್ಮಕ ಕನಸು ಹಾಗೂ ಹಳವಂಡಗಳು, ಭೂತ ವರ್ತಮಾನಗಳನ್ನ ತಳಿಕೆಹಾಕುವ ತಂತ್ರಗಳಿಂದಾಗಿ ಕತೆ ಪರಿಣಾಮದಲ್ಲಿ ಗೆಲ್ಲುತ್ತದೆ. ಸೇಡಿಗೆ ಸೇಡು ಎಂಬ ಸರಳೀಕರಣವಾಗದೆ ನೊಂದ ಮನಸ್ಸು ಹೇಗೆ ಅಮಾನುಷವಾಗಬಲ್ಲದು, ಆರ್ತತೆ ಹೇಗೆ ಕ್ರೌರ್ಯಕ್ಕಿಳಿಯಬಲ್ಲುದು ಎಂಬುದನ್ನ ತೋರಿಸುತ್ತದೆ. ಹಣ ಹೇಗೆ ಕೌಟುಂಬಿಕ ಸಂಬಂಧವನ್ನೂ ಕೆಡಿಸುತ್ತದೆ, ರಕ್ತ ಸಂಬಂಧವನ್ನೂ ಅಲ್ಲಗಳೆಯುತ್ತದೆ ಎಂಬುದನ್ನ ಚಿತ್ರಿಸುತ್ತದೆ. ಪರ್ಯಾಯವಾಗಿ ಅನಗತ್ಯವಾದಷ್ಟು ಸಂಪತ್ತಿನ ಶೇಖರಣೆ ಮನುಷ್ಯನನ್ನ ಕುರುಡಾಗಿಸುವ ಬಗ್ಗೆ ಎಚ್ಚರಿಸುತ್ತದೆ. ಆರ್ಥಿಕ ಅಸಮಾನತೆ ಹೆಚ್ಚುತ್ತ ಹೋದಾಗ ಆತ್ಮೀಯ ವಲಯದಲ್ಲೆ ವರ್ಗಸಂಘರ್ಷ ಅನಿವಾರ್ಯವಾಗುವುದನ್ನು ಧ್ವನಿಸುತ್ತದೆ.

ಹಸಿವು ಬಡತನ ರೋಗ ಹೇಗೆ ಮಾನವೀಯ ಭಾವನೆಯ ದಿಕ್ಕು ತಪ್ಪಿಸುತ್ತದೆ ಎನ್ನುವುದಕ್ಕೆ ಸತ್ತವನ ಸಮಾರಾಧನೆ (ಸಂ. ೧೬) ಹೆಣದ ಬಟ್ಟೆ (ಸಂ. ೫) ಎರಡು ಪ್ರಪಂಚಗಳು (ಸಂ.೧೪) ಸ್ವಾರ್ಥ ಐಶ್ವರ್ಯ ಅಧಿಕಾರ ಎಂಥ ಧಿಮಾಕಿಗೆ ಎಡೆಕೊಡುತ್ತವೆ ಎಂಬುದಕ್ಕೆ ಅವಳ ಮುದ್ದು ಮರಿ (ಸಂ.೧೧) ಪ್ರಶಾಂತ ಹುಲ್ಲುಗಾವಲು(ಸಂ.೯) 'ಜಾನ್ ಪ್ರೈಸ್‌ನ ಉಕ್ಕಿನ ನೆರಳು' (ಸಂ.೮) ಕಥೆಗಳನ್ನ ನೋಡಬಹುದು.

(ಮುಂದುವರೆಯುವುದು)

---

**ಕೇಂದ್ರ ಸಾಹಿತ್ಯ ನಾಟಕ ಅಕಾಡೆಮಿಯಿಂದ ಈ ವರ್ಷ ಪ್ರಶಸ್ತಿಗಳನ್ನು ಗಳಿಸಿದ ಡಾ. ಚಂದ್ರಶೇಖರ ಕಂಬಾರ, ಯಶವಂತ ಚಿತ್ತಾಲ ಹಾಗೂ ಸಕ್ಸೇನಾ (ಸಮುದಾಯ ಅಭಿನಯಿಸಿದ 'ಕುರಿ' ನಾಟಕದ ಕರ್ತೃ) ಅವರುಗಳನ್ನು ವಾರ್ತಾಪತ್ರ ಅಭಿನಂದಿಸುತ್ತದೆ.**

---

# ಜನೋತ್ಸವ : ಒಂದು ವರದಿ

ಇದುವರೆಗೆ ಬೆಂಗಳೂರಿನಲ್ಲಿ ಹಲವಾರು ಸಾಂಸ್ಕೃತಿಕ ಮೇಳಗಳು ಉತ್ಸವಗಳು ನಡೆದಿವೆ. ಬಹುಪಾಲು ಈ ಎಲ್ಲ ಕಾರ್ಯಕ್ರಮಗಳು ಒಂದೋ ನಮ್ಮ ಸನಾತನ ಮೌಲ್ಯಗಳಲ್ಲಿ ಬೇರೂರಿರುತ್ತವೆ ; ಇಲ್ಲ ನಮ್ಮದಾಗಲು ಸಾಧ್ಯವಾಗದ ಅತ್ಯಾಧುನಿಕ ನಗರೀಕರಣಕ್ಕೆ ಒಳಪಟ್ಟ ಆಮದು ಸಂಸ್ಕೃತಿಯಲ್ಲಿ ಹೊರಳಾಡುತ್ತಿರುತ್ತವೆ. ಇವಾವೂ ಕೂಡ ಭಾರತದ ಜನಸಾಮಾನ್ಯನ ಲೌಕಿಕ ಸುಖ ದುಃಖಗಳಿಗೆ ಸ್ಪಂದಿಸುವ ವಿನ್ಯಾಸವನ್ನುಳ್ಳ ರೀತಿಯಲ್ಲಿ ಸಂಘಟಿತವಾಗಿರಲಿಲ್ಲ ಎನ್ನಬಹುದು. ದಿನನಿತ್ಯದ ಯಾಂತ್ರಿಕ ಬದುಕನ್ನು ಅನಿವಾರ್ಯವಾಗಿ ಸ್ವೀಕರಿಸುವ ಕಾರ್ಮಿಕನಿಗಾಗಲೀ, ಆಫೀಸುಗಳ ಫೈಲುಗಳ ಮಧ್ಯೆ ಉಸಿರುಕಟ್ಟಿಹೋಗುವ ಬಿಳಿಹಕ್ಕಿಗಳಿಗಾಗಲೀ ಸಂಸ್ಕೃತಿಯ ಬಗೆಗಿನ ಕಲ್ಪನೆ ತೀರ ಮೇಲುಪದರಿನದ್ದಾಗಿರುತ್ತದೆ. ತನ್ನ ಕುಟುಂಬದ ಪರಿಸರದಲ್ಲಿ ಒಳಗೆ ಸರಿದುಕೊಳ್ಳುವ ಇವನಿಗೆ ಹರಿಕಥೆಯಾಗಬಹುದು, ದೇವಸ್ಥಾನ, ರಾಮಮಂದಿರದಲ್ಲಿ ನಡೆಯುವ ಹಾಡುಗಾರಿಕೆ, ಭಜನೆ ಇತ್ಯಾದಿಗಳಾಗಬಹುದು—ತಾನು ಯಾವುದೋ 'ಸಂಸ್ಕೃತಿ'ಯ ಭಾಗವಾಗಿದ್ದೇವೆ ಎನ್ನುವ ಭರವಸೆಯನ್ನು ತುಂಬುತ್ತವೆ. ಜೊತೆಗೆ ಆಂತರಿಕವಾಗಿ ಅವನನ್ನು ಸಿದ್ಧ ವಿಚಾರಗಳಿಗೆ ಎಳೆದುಕಟ್ಟುತ್ತವೆ. ಈ ದೇಶದ ಕಲೆ ಮತ್ತು ಸಂಸ್ಕೃತಿಗಳ ಸಂಬಂಧ ಇಂತಹದ್ದು. ಆದರೆ ಮನುಷ್ಯನನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ಹೊಸ ಅನುಭವಕ್ಕೆ ನಮ್ಮನ್ನು ಈಡುಮಾಡಿಕೊಳ್ಳುವಂಥದ್ದು. ಇದನ್ನು ಪರ್ಯಾಯ ಸಂಸ್ಕೃತಿಯ ನಿರ್ಮಾಣದ ಪ್ರಯತ್ನವೆಂದೂ ಹೇಳಬಹುದು.

ಇಂಥ ಪ್ರಯತ್ನ ಮೊದಲ ಬಾರಿಗೆ ಬೆಂಗಳೂರಿನಲ್ಲಿ ನಡೆದದ್ದು 83 ಡಿಸೆಂಬರ್ 15, 16, 17 ರಂದು ಸಂಘಟಿಸಿದ "ಜನೋತ್ಸವ"ದಲ್ಲಿ. ಜನೋತ್ಸವಕ್ಕೆ ಬಂದವರಲ್ಲಿ ಮಿಶ್ರ ಪ್ರತಿಕ್ರಿಯೆ ಕೂಡ ಬಂದದ್ದು ಸಹಜ. ಕೆಲವರಿಗೆ ಕೆಂಪುತೋಟ "ಕೆಂಪಾಗಿ" ಕಂಡು ಬಂದಿದ್ದರೆ ಆಶ್ಚರ್ಯವಿಲ್ಲ. ಇನ್ನು ಕೆಲವರಿಗೆ ಉಡಾಫೆಯ ಮಾತುಗಳನ್ನು ಬಿಟ್ಟು ಮತ್ತೇನೂ ಹೇಳಿದಂತೆ ಕಾಣಲಿಲ್ಲ. ವಿಭಿನ್ನ ಅಭಿರುಚಿಯ ಶಾಸ್ತ್ರವತೆಯ ನಡುವೆಯೂ "ಜನೋತ್ಸವ" ನಾವು ಗಮನಿಸಬೇಕಾದಂತಹ ವಿಶಿಷ್ಟತೆಯಿಂದ ಕೂಡಿತ್ತೆಂದೂ ಹೇಳಬಹುದು. ಗೀತ ಸಂಗೀತ, ಮಕ್ಕಳ ಚಿತ್ರರಚನೆ, ಜಾದುಗಾರಿಕೆ ಮುಂತಾದ ಕಾರ್ಯಕ್ರಮಗಳು ರಂಜನೀಯವಾಗಿದ್ದವು. 'ಮಹಿಳಾ ಲೋಕ' ವಿಚಾರ ಪ್ರಚೋದಕವಾಗಿತ್ತು. ಸೂತ್ರಧಾರ ತಂಡದವರಿಂದ ಅಭಿನಯಿ

ಸಲ್ಪಟ್ಟ 'ತಾಮ್ರಪತ್ರ', ಅನೇಕ ರೀತಿಯಲ್ಲಿ 'ತದ್ರೂಪಿ'ಗಿಂತ ಉತ್ತಮವಾದ ಪ್ರದರ್ಶನವಾಗಿತ್ತು. ಆದರೆ ಬಹಳಷ್ಟು ಜನಗಳು ಮುಗಿಬೀಳುತ್ತಿದ್ದ ಕೀಲುಕುದುರೆ ನರ್ತನ ಅತ್ಯಂತ ಅಶ್ಲೀಲಕರವಾಗಿತ್ತು. ದೃಶ್ಯಕಲೆಗಳ ಜೊತೆಗೆ ಸಾಹಿತ್ಯ ವಿಮರ್ಶೆ, ಕಾವ್ಯವಾಚನದಂಥ ಅಪರೂಪ ಕಾರ್ಯಕ್ರಮಗಳು ಉತ್ಸವದಲ್ಲಿ ಹೆಚ್ಚು ಉಪಯುಕ್ತವಾಗಬಹುದೆಂಬ ನಿರೀಕ್ಷೆ ಸುಳ್ಳಾಗಲಿಲ್ಲ. ಜಿ. ಎಸ್. ಎಸ್. ಡಿ. ಆರ್. ನಾಗರಾಜ್ ಕ. ಪೆಂ. ರಾಜಗೋಪಾಲ್, ರಾಮಚಂದ್ರಶರ್ಮ, ರಂಜಾನ್ ದರ್ಗಾ ಚರ್ಚೆಯಲ್ಲಿ ಭಾಗವಹಿಸಿದ್ದರು. ಡಿ. ಆರ್. ಅವರ ಗೊಂದಲದ ಮಾತುಗಳು ಚರ್ಚೆಯನ್ನು ಗೊತ್ತುಗುರಿ ಇಲ್ಲದಂತೆ ಎಳೆದುಕೊಂಡು ಹೋಗುತ್ತಿತ್ತು. ಎಚ್. ಎಸ್. ಶಿವಪ್ರಕಾಶ್ ಹಾಗೂ ಸಿದ್ಧಲಿಂಗಯ್ಯನವರ ಕಾವ್ಯದ ಬಗೆಗಿನ ಚರ್ಚೆ ಕುತೂಹಲಕರವಾಗಿತ್ತು. ಕಾವ್ಯವಾಚನ ಕಾರ್ಯಕ್ರಮದ ಹೆಸರಿನಲ್ಲಿ ಕೆ. ಎಲ್. ಗೋಪಾಲಕೃಷ್ಣಯ್ಯ ಮತ್ತು ಎಚ್. ಎಸ್. ರಾಘವೇಂದ್ರರಾವ್ ಅಪದ್ಧಗಳಿಂದ ಕನ್ನಡ ಪಾಠವಿತ್ತು. ಕೆ. ಎಸ್. ನರಸಿಂಹಸ್ವಾಮಿಯವರು ಅಧ್ಯಕ್ಷತೆವಹಿಸಿದ್ದ ಈ ಸಮಾರಂಭ ಅಷ್ಟೇನೂ ಕಳೆಗಟ್ಟಲಿಲ್ಲ.

ಪ್ರಗತಿಪರ ಮಾತುಗಳನ್ನಾಡುವ ನಮ್ಮ ವಿಮರ್ಶಕ ಮಹಾಶಯರು ಎಷ್ಟರ ಮಟ್ಟಿನ ಸಾಮಾಜಿಕ ಕಳಕಳಿಯನ್ನು ಹೊಂದಿದ್ದಾರೆ ಎನ್ನುವುದಕ್ಕೆ ಒಂದು ಉದಾಹರಣೆಯನ್ನು ಕೊಡುವುದು ಸೂಕ್ತ. ಸಮ್ಮೇಳನಕ್ಕೆ ಬಂದಿದ್ದ ಕಾರ್ಮಿಕರೊಡನೆ ಊಟಕ್ಕೆ ಕೂರಲು ಸಹಾ ಅವರು ತಯಾರಿರಲಿಲ್ಲ. 'ಹೇಗಪ್ಪ ಅವರ ಜೊತೆ ಊಟ ಮಾಡೋದು, ನಮಗೆ ಹೋಟೆಲಿನಲ್ಲಾದರೆ ಚೆಂದ' ಎನ್ನುವ ಮಾತುಗಳು ಕೇಳಿಬಂದವು. ಅಷ್ಟೇ ಅಲ್ಲದೆ ಇವರಿಗೆ ಹೋಟೆಲಿನಲ್ಲಿ ಊಟ ಹಾಕಿಸಬೇಕಾಗಿ ಬಂತು ಎಂಬುದೂ ಸತ್ಯ. ಇಂಥ ಹಿಪಾಕ್ರಸಿ ನಮ್ಮ ಸಮಾಜವನ್ನು ಯಾವ ದಿಕ್ಕಿನತ್ತ ತಳ್ಳುತ್ತದೋ ಹೇಳುವುದು ಕಷ್ಟ. ಬುದ್ಧಿಜೀವಿಗಳು ಶ್ರಮಜೀವಿಗಳೊಂದಿಗೆ ಬೆರೆಯುವ ಒಂದೇ ಒಂದು ಅವಕಾಶಕ್ಕೂ ಬೆನ್ನುತಿರುಗಿಸುವ ಈ ನಡವಳಿಕೆ ಅಕ್ಷಮ್ಯ ಅಪರಾಧವೆನಿಸುತ್ತದೆ.

ಅಷ್ಟಿಷ್ಟು ಅರೆಕೊರೆಗಳಿದ್ದರೂ ಜಾನ್ ದೇವರಾಜ್, ರಘುನಂದನ್, ಶ್ರೀನಿವಾಸಮೂರ್ತಿಯವರಂಥ ಕಾರ್ಯಕರ್ತರ ಶ್ರಮದಿಂದ ಇಂಥ ಬೃಹತ್ ಯೋಜನೆ ಸಫಲವಾಯಿತೆಂದು ಹೇಳಬಹುದು. ಜನಪರವಾದ ಹೊಸ ಸಂಸ್ಕೃತಿಯನ್ನು ಬೆಳೆಸುವಂತಹ ಇಂತಹ ಉತ್ಸವಗಳು ಆಗಾಗ್ಗೆ ನಡೆಯಲಿ ಎಂದು ಹಾರೈಸುವೆ.

—[illegible]

## ವಿಚಾರ

ನೊಬೆಲ್ ಪಾರಿತೋಷಕ ವಿಜ್ಞಾನ ಹಾಗೂ ಮಾನವೀಯ ಮೌಲ್ಯಗಳ ಸಂಕೇತ. ಟಿ. ಎನ್. ಟಿ. ಆಸ್ಫೋಟಕದ ಪಿತಾಮಹನಾದ ನೊಬೆಲ್ ಆಗರ್ಭ ಶ್ರೀಮಂತ. ತಾನು ಬರೆದಿಟ್ಟ ಉಯಿಲಿನಲ್ಲಿ ತನ್ನ, ರೂಢಿಸಬಹುದಾದ, ಎಲ್ಲಾ ಆಸ್ತಿಯನ್ನು ಐದು ಸಮಭಾಗಗಳಾಗಿ ವಿಂಗಡಿಸಿ ಅದರಿಂದ ಬರುವ ಆದಾಯವನ್ನು ಐದು ನಿರ್ದಿಷ್ಟ ಕ್ಷೇತ್ರಗಳಲ್ಲಿಮಹತ್ಸಾಧನೆ ಮಾಡಿರುವ ವ್ಯಕ್ತಿಗಳಿಗೆ ಅಥವಾ ಸಂಘ ಸಂಸ್ಥೆಗಳಿಗೆ ಪ್ರತಿವರ್ಷ ಪುರಸ್ಕಾರ ನೀಡುವ ಇಚ್ಛೆಯನ್ನು ಸ್ಪಷ್ಟೀಕರಿಸಿದ. ಭೌತಶಾಸ್ತ್ರ, ರಸಾಯನಶಾಸ್ತ್ರ, ಮಾನವ ಶರೀರವಿಜ್ಞಾನ ಅಥವಾ ವೈದ್ಯಕೀಯ ವಿಜ್ಞಾನ, ಸಾಹಿತ್ಯ ಹಾಗೂ ವಿಶ್ವಶಾಂತಿ–ಈ ಕ್ಷೇತ್ರಗಳಲ್ಲಿ ಅಮೂಲ್ಯ ಕೊಡುಗೆಯನ್ನು ಸಲ್ಲಿಸಿದ ಯಾರಿಗಾದರೂ ಈ ಪುರಸ್ಕಾರಗಳು ಸಲ್ಲಬೇಕೆನ್ನುವುದು ಅವನ ಇಚ್ಛೆ. ಮೊದಲ ನಾಲ್ಕು ಕ್ಷೇತ್ರಗಳಲ್ಲಿ ಬಹುಮಾನಿತರನ್ನು ನಿರ್ಧರಿಸುವುದು ಸ್ವೀಡನ್‌ನ ನೊಬೆಲ್ ಪಾರಿತೋಷಕ ಸಮಿತಿ. ಆದರೆ ರಾಜಕೀಯ ಕಾರಣಗಳಿಂದಾಗಿ ವಿಶ್ವಶಾಂತಿಯ ಪಾರಿತೋಷಕವು ಅನರ್ಹ ವ್ಯಕ್ತಿಗೆ ಸಲ್ಲಬಾರದೆನ್ನುವ ಮುಂದಾಲೋಚನೆಯಿಂದ ನೊಬೆಲ್ ವಿಶ್ವಶಾಂತಿಗಾಗಿ ಸೇವೆ ಸಲ್ಲಿಸಿದ ವ್ಯಕ್ತಿ ಅಥವಾ ಸಂಸ್ಥೆಯನ್ನು ಗುರುತಿಸಿ ನಿರ್ಧರಿಸುವ ಹಕ್ಕನ್ನು ನಾರ್ವೆಯ ಪಾರ್ಲಿಮೆಂಟಿಗೆ ವಹಿಸಿದ್ದಾನೆ.

ಮೊತ್ತ ಮೊದಲ ವಿಶ್ವಶಾಂತಿಯ ಪಾರಿತೋಷಕವು ಅಂತರರಾಷ್ಟ್ರೀಯ ರೆಡ್ ಕ್ರಾಸ್ ಸಂಸ್ಥೆಯ ಸ್ಥಾಪಕನಿಗೆ ಸಂದಿತು. ಆದರೆ ಕಾಲಾನಂತರ ಈ ಪಾರಿತೋಷಕಕ್ಕೆ ಅರ್ಹವ್ಯಕ್ತಿ ಅಥವಾ ಸಂಸ್ಥೆಗಳನ್ನು ನಿರ್ಧರಿಸುವ ಕಾರ್ಯದಲ್ಲಿ ರಾಜಕೀಯ ಅಂಶಗಳು ಪ್ರೇರಕವೆನಿಸುತ್ತಿವೆ ಎಂಬ ಅನುಮಾನ ನೊಬೆಲ್ ಪಾರಿತೋಷಕದ ಖ್ಯಾತಿಯಷ್ಟೇ ವಿಶ್ವವ್ಯಾಪಿಯಾಗಿದೆ. ಈ ಅನುಮಾನ ಹಲವಾರು ಬಾರಿ ಸಾಹಿತ್ಯ ಕ್ಷೇತ್ರಕ್ಕೂ ಅನ್ವಯವಾಗುವಂತಿದೆ.

ಲಕ್ಷಾಂತರ ಮಂದಿ ನಿರಪರಾಧಿಗಳ ಸಾವಿಗೆ ಕಾರಣವಾದ ವಿಯೆಟ್ನಾಂ ಸಮರದಲ್ಲಿ ಗುಪ್ತ ಬಾಂಬಿಂಗ್‌ಗೆ ಮೂಲಪುರುಷನಾಗಿದ್ದ ಹೆನ್ರಿ ಕಿಸಿಂಜರ್, ಕ್ಯಾಂಪ್ ಡೇವಿಡ್ ಒಪ್ಪಂದಕ್ಕೆ ಸಹಭಾಗಿಯಾಗಿದ್ದ ಸಾದತ್ ಮತ್ತು ಪ್ಯಾಲೆಸ್ಟೈನ್ ನಿರಾಶ್ರಿತರ ನರಮೇಧಕ್ಕೆ ಕಾರಣನಾದ ಬೆಗಿನ್ ಕೂಡ ಈ ಪಾರಿತೋಷಕ್ಕೆ ಅರ್ಹರೆನಿಸಿದ್ದು ಈ ಶತಮಾನದ ವಿಪರ್ಯಾಸಕರ ಆಶ್ಚರ್ಯ. ಹಾಗೆಯೇ ನಮ್ಮೆಲ್ಲರ ದೂರ ನೋಟದ ಸಹಾನುಭೂತಿಯನ್ನು ದೊರಕಿಸಿಕೊಂಡಿರುವ ಪೋಲೆಂಡಿನ ಲೆಚ್ ವಾಲೇಸಾನ ಆಯ್ಕೆ ಕೂಡ ಸಂಶಯಾತೀತವಲ್ಲ. ಈ ಉದಾಹರಣೆಗಳು ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಕೆಲವು ಆಯ್ಕೆಗಳು ಸಮಾಜವಾದದ ವಿರೋಧಿಗಳು ಮಾತ್ರ ಈ ಪಾರಿತೋಷಕಕ್ಕೆ ಅರ್ಹರು ಎನ್ನುವ ಧ್ವನಿಯನ್ನು ದೃಢಪಡಿಸುವುದಿಲ್ಲವೇ ? ನೊಬೆಲ್ ತನ್ನ ಉಯಿಲಿನಲ್ಲಿ ಸ್ಪಷ್ಟೀಕರಿಸಿದ ಇಚ್ಛೆಗೆ ಇದು ವಿರುದ್ಧವೆನಿಸುವುದಿಲ್ಲವೇ ?

—ಪಕ್ಷ

---

## ಸಮುದಾಯ ಚಟುವಟಿಕೆಗಳು

**ಮೈಸೂರು : ಪುಲಪೇಡಿ** ನಾಟಕವನ್ನು ನವೆಂಬರ್ ತಿಂಗಳ 26 ಹಾಗೂ ಡಿಸೆಂಬರ್ 23ರಂದು ಪ್ರದರ್ಶಿಸಲಾಯ್ತು. ಡಿಸೆಂಬರ್ 4ರಂದು ಸಮುದಾಯದ ಆಶ್ರಯದಲ್ಲಿ ಬೀದಿ ನಾಟಕ ರಚನಾ ಶಿಬಿರವನ್ನು ಏರ್ಪಡಿಸಲಾಯಿತು. ಕ್ಯಾಪಿಟೇಷನ್ ಶುಲ್ಕ ಹಾಗೂ ಪಕ್ಷಾಂತರದ ಬಗ್ಗೆ ಎರಡು ಬೀದಿ ನಾಟಕಗಳನ್ನು ರಚಿಸಲಾಯಿತು. ಈ ನಾಟಕಗಳ ಪ್ರದರ್ಶನವನ್ನು ಜನವರಿ ಒಂದರಿಂದ ಫೆಬ್ರವರಿಯವರೆಗೆ ನಗರದ ವಿವಿಧ ಬಡಾವಣೆಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಪ್ರದರ್ಶಿಸಲಾಗುವುದು.

ಮಾರ್ಚ್ 11ರಂದು ನಾಟಕ ಕೃತಿ ಹಾಗೂ ಪ್ರಯೋಗವನ್ನು ಕುರಿತಂತೆ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿದೆ. "ಸಮುದಾಯ ವಾರ್ತಾಪತ್ರ ವೇದಿಕೆ ಮತ್ತು ಸಮುದಾಯ ಮೈಸೂರು" ಆಶ್ರಯದಲ್ಲಿ ನಡೆಯುವ ಎರಡು ಗೋಷ್ಠಿಗಳ ಜೊತೆಗೆ ಪುಸ್ತಕ ಪ್ರದರ್ಶನ ಹಾಗೂ ನಾಟಕ ಪ್ರದರ್ಶನವನ್ನು ಏರ್ಪಡಿಸಲಾಗಿದೆ.

**ದಾವಣಗೆರೆ :** ದಾವಣಗೆರೆ ಹತ್ತಿರ ಕೊಂಡಜ್ಜಿಯಲ್ಲಿ ಡಿ. 15ರಿಂದ 25ರವರೆಗೆ ಸಮುದಾಯ ಜನಪದ ರಂಗತರಬೇತಿ ಶಿಬಿರ ನಡೆಯಿತು. ಅದರಲ್ಲಿ ಸಮುದಾಯದ ಘಟಕಗಳ ಸದಸ್ಯರುಗಳ ಜೊತೆಗೆ ಬೇರೆ ಬೇರೆ ರಂಗತಂಡಗಳ ಸದಸ್ಯರು ಭಾಗವಹಿಸಿದ್ದರು. ಈ ಶಿಬಿರದಲ್ಲಿ ಮೂಡಲಪಾಯ ಬಯಲಾಟದ ತಂತ್ರಗಳನ್ನು ಅಭ್ಯಾಸಮಾಡಿ 'ಸುಂದೋಪಸುಂದ' ಎನ್ನುವ ಬಯಲಾಟದ ಕಥೆಯನ್ನು ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವಂತೆ ರಚಿಸಿ ಅದನ್ನು ಕೊಂಡಜ್ಜಿ ಗ್ರಾಮದಲ್ಲಿ ಪ್ರದರ್ಶಿಸಲಾಯ್ತು. ಅನಂತರ ದಾವಣಗೆರೆ ಸಮುದಾಯದವರು ಇದೇ ನಾಟಕವನ್ನು ದಾವಣಗೆರೆಯ ರೇಣುಕ ಮಂದಿರದಲ್ಲಿ ಪ್ರದರ್ಶಿಸಲು ಏರ್ಪಾಡು ಮಾಡಿದ್ದರು. ಇದರ ನಿರ್ದೇಶನ ಮಂದೇನೂರ ಸಂಗಣ್ಣನವರದು. ನಾಟಕ ರಚನೆ ಬಸವರಾಜ ಮಲಶೆಟ್ಟಿ, ನಿಸರ್ಗಪ್ರಿಯ, ರಂಗಾರೆಡ್ಡಿ ಕೋಡಿರಾಂಪುರ ಅವರದು. ಹಾಡುಗಳು ನಿಸರ್ಗಪ್ರಿಯ ಸಂಗೀತ ಮತ್ತು ನೃತ್ಯ ನಿರ್ದೇಶನ ಶಾಮನೂರು ಎಂ. ರೇವಣಸಿದ್ದಪ್ಪ ಭಾಗವತರದು.

6-1-84ರಂದು ಸಮುದಾಯ, ಕುಂದಾಪುರದವರು 'ಸಾಹಿತ್ಯ ಮತ್ತು ರಾಜಕೀಯ ಸಾಹಿತ್ಯ, ಸಾಹಿತಿ, ಸಾಮಾಜಿಕ ಜವಾಬ್ದಾರಿ, ಬದ್ಧತೆ' ಎಂಬ ವಿಚಾರ ಸಂಕಿರಣವು ಶ್ರೀಯುತರಾದ ರಘುನಾಥರಾವ್ ಮಾಲ್ಯ, ರಘುರಾಮರಾವ್ ಕುಂದಾಪುರ ಮತ್ತು ಬಿ. ಜಿ. ಮೊಯ್ಯ ಗುಂಡ್ಮಿ ಇವರುಗಳ ನೇತೃತ್ವದಲ್ಲಿ ನಡೆಸಿದ್ದಾರೆ.

11-1-1984 ರಂದು ಕರ್ನಾಟಕ ರಾಜ್ಯ ಸಮುದಾಯ ಸಮನ್ವಯ ಸಮಿತಿ (ರಿ) ಮತ್ತು ಬೆಂಗಳೂರು ಸಮುದಾಯದವರು, ಬೆಂಗಳೂರಿನಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ನಡೆಸಿದ ವಲಯ 'ಜಾನಪದ' (?) ನಾಟಕೋತ್ಸವದಲ್ಲಿ ತಮಿಳುನಾಡು ಕೇರಳ, ಆಂಧ್ರ, ಕರ್ನಾಟಕ ರಾಜ್ಯಗಳಿಂದ ಭಾಗವಹಿಸಿದ ತಂಡಗಳು, ವೀಕ್ಷಕರು ಹಾಗೂ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಅಧಿಕಾರಿಗಳು ಹಾಗೂ ಬೆಂಗಳೂರಿನ ವಿವಿಧ ನಾಟಕ ತಂಡಗಳ ಪ್ರತಿನಿಧಿಗಳಿಗೆ ಒಂದು ಚಹಾಕೂಟವನ್ನು ಏರ್ಪಡಿಸಿದ್ದವು. ಇದೇ ಸಂದರ್ಭದಲ್ಲಿ ಸಮುದಾಯದ ಪ್ರಾರಂಭದಿಂದ ಇಂದಿನ ವರೆಗೆ ಪ್ರಯೋಗಿಸಿರುವ ನಾಟಕಗಳ ಭಾವಚಿತ್ರಗಳು ಮತ್ತು ಭಿತ್ತಿಪತ್ರಗಳ ಪ್ರದರ್ಶನ ಒಂದನ್ನು ಏರ್ಪಡಿಸಲಾಗಿತ್ತು. ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಸಹಕಾರ್ಯದರ್ಶಿ ಶ್ರೀ ಭಾರ್ಗವ, ಆಂಧ್ರಪ್ರದೇಶ ನಾಟಕ ಅಕಾಡೆಮಿಯ ಕಾರ್ಯದರ್ಶಿ ಶ್ರೀ ಕೃಷ್ಣಮರಾಜು ಹಾಗೂ ಕಳೆದ ತಿಂಗಳು ಕೊಂಡಜ್ಜಿಯಲ್ಲಿ ಸಮುದಾಯ ರಂಗತರಬೇತಿ ಶಿಬಿರವನ್ನು ನಡೆಸಿಕೊಟ್ಟ ಶ್ರೀ ಮುದೇನೂರು ಸಂಗಣ್ಣ ಮತ್ತು ಶ್ರೀ ಸಿ[illegible]ಗಂಗಯ್ಯ (ನಿಸರ್ಗಪ್ರಿಯ) ಇವರುಗಳೂ ಭಾಗವಹಿಸಿದ್ದರು.

## ಶಂಬೂಕ ಪ್ರಕಾಶನ, ಗೌರಿಬಿದನೂರು.

### ಅವರ ಪ್ರಕಟಣೆಗಳು

| | | |
|---|---|---|
| ಲಿಖಿತ ಜಾನಪದ | — | ರಂಗಾರೆಡ್ಡಿ ಕೋಡಿರಾಂಪುರ |
| ಗಿಡುಗ ಮತ್ತು ಜೀವ | — | ಮಹೇಂದ್ರ ಪ್ರಸಾದ್ |
| ಪ್ರಸ್ತಾಪ | — | ಜಿ. ಆರ್. ತಿಪ್ಪೇಸ್ವಾಮಿ |
| ಗಣಪತಿ | — | ಪುರಾಣಂ ಸುಬ್ರಹ್ಮಣ್ಯಶರ್ಮ<br>ಅನು : ನಗರಗೆರೆ ರಮೇಶ್ |
| ಕಿರುಹೊತ್ತಿಗೆ ;<br>ಗಾಂಧೀಜಿ–ನಮಗೆಷ್ಟು [illegible] ಪ್ರಸ್ತುತರು | | ಡಾ॥ ಜಿ. ರಾಮಕೃಷ್ಣ |
| [illegible]ತ್ರಿ | — | ವಿವಿಧ ಲೇಖಕರು |

# ವಿಧವೆಯರಿಗೆ ಮಾಸಿಕ ವೇತನ

★ ಈಗಾಗಲೇ ವೃದ್ಧರು ಮತ್ತು ಅಂಗವಿಕಲರ ಜೀವನ ನಿರ್ವಹಣೆಗೆ ಮಾಸಾಶನ ನೀಡುತ್ತಿರುವ ಸರ್ಕಾರ, ಈ ದಿಶೆಯಲ್ಲಿ ಮತ್ತೊಂದು ಹೆಜ್ಜೆ ಮುನ್ನಡೆದಿದೆ.

★ ೧,೫೦೦ ರೂಪಾಯಿಗಿಂತ ಕಡಿಮೆ ವಾರ್ಷಿಕ ಆದಾಯದ ಎಲ್ಲ ವಿಧವೆಯರಿಗೂ ತಿಂಗಳಿಗೆ ೫೦ ರೂ. ಮಾಸಿಕ ವೇತನ ದೊರೆಯಲಿದೆ.

★ ಈ ಮಾಸಿಕ ವೇತನವು ಅಂತಹ ವಿಧವೆಯರು ೬೦ ವರ್ಷ ವಯಸ್ಸು ಮುಟ್ಟುವವರೆಗೂ ದೊರೆಯುತ್ತದೆ. ನಂತರ ಅವರಿಗೆ ವೃದ್ಧಾಪ್ಯ ವೇತನ ಸೌಲಭ್ಯ ಸಿಗುತ್ತದೆ.

★ ವಿಧವೆಯರಿಗೆ ವೃದ್ಧಾಪ್ಯ ವೇತನ ನೀಡಿಕೆ ವ್ಯವಸ್ಥೆಯು ಜನವರಿ ೧೯೮೪ ರಿಂದ ಜಾರಿ ವಾಗಲಿದೆ.

ಪ್ರಕಟಣೆ : ಕರ್ನಾಟಕ ವಾರ್ತೆ